

ಕರ್ನಾಟಕ ಸರ್ಕಾರ

# ತಿಳಿ ಕನ್ನಡ

## ದ್ವಿತೀಯಭಾಷಾ ಕನ್ನಡ ಪಠ್ಯಪುಸ್ತಕ

## ಎಂಟನೆಯ ತರಗತಿ






## ೨೦೧೫

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)**

೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೇ ಹಂತ,
ಬೆಂಗಳೂರು – ೮೫

## ಪಠ್ಯಪುಸ್ತಕ ರಚನಾ ಸಮಿತಿ

### ಅಧ್ಯಕ್ಷರು

**ಪ್ರೊ. ಹೆಚ್.ಎಮ್. ಮಹೇಶ್ವರಯ್ಯ** ಕನ್ನಡ ಪ್ರಾಧ್ಯಾಪಕರು ಮತ್ತು ಡೀನರು, ಕಲಾನಿಕಾಯ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ – ೫೮೦೦೦೩.

### ಸದಸ್ಯರು

೧. **ಶ್ರೀ ಬಿ.ಎಸ್. ಗುಂಡೂರಾವ್,** ನಿವೃತ್ತ ಮುಖ್ಯ ಶಿಕ್ಷಕರು ನಂ.೮೫, ಮಹಾಲಕ್ಷ್ಮೀಪುರಂ, ಬೆಂಗಳೂರು – ೮೬.

೨. **ಶ್ರೀ ವಿ.ಪಿ. ದಾರುಕಾರಾಧ್ಯ,** ನಿವೃತ್ತ ಮುಖ್ಯ ಶಿಕ್ಷಕರು ನಂ.೧೨೬೯, ೨ನೇ ಹಂತ, ರಾಜಾಜಿನಗರ, ಬೆಂಗಳೂರು – ೧೦.

೩. **ಶ್ರೀಮತಿ ಕಲಾವತಿ ಜಿ.ಕೆ. ಹೊಳ್ಳ** ನಂ.೨, ರಾಧಾಕೃಷ್ಣ ಬಡಾವಣೆ, ೩ನೇ ಹಂತ, ಪದ್ಮನಾಭನಗರ ಬೆಂಗಳೂರು – ೭೦.

೪. **ಶ್ರೀ ಶಿವಯ್ಯ ಮಠಪತಿ** ಪ್ರಾಚಾರ್ಯರು, ಮಾತೃಭಾಯ ಪದವಿ ಪೂರ್ವ ಕಾಲೇಜು, ಸೇಡಂ, ಕಲಬುರಗಿ ಜಿಲ್ಲೆ.

೫. **ಶ್ರೀ ಬೆಳವಾಡಿ ಮಂಜುನಾಥ** ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು ಮೂಗ್ತಿಹಳ್ಳಿ, ಚಿಕ್ಕಮಗಳೂರು ಜಿಲ್ಲೆ.

೬. **ಶ್ರೀ ಪ್ರಕಾಶ್ ನಂದಿಹಳ್ಳಿ** ಚಿತ್ರಕಲಾ ಶಿಕ್ಷಕರು, ಸರಸ್ವತಿ ಪ್ರೌಢಶಾಲೆ ಶಿಡ್ಲಘಟ್ಟ, ಚಿಕ್ಕಬಳ್ಳಾಪುರ ಜಿಲ್ಲೆ – ೫೬೨ ೧೦೫.

### ಪರಿಶೀಲಕರು

ಶ್ರೀ **ಕೆ.ಎಸ್. ರಾಮಮೂರ್ತಿ,** ಉಪನ್ಯಾಸಕರು ವಾಣಿವಿಲಾಸ ಸಂಯುಕ್ತ ಪದವಿಪೂರ್ವ ಕಾಲೇಜು ಕೋಟೆ, ಬೆಂಗಳೂರು–೦೨.

### ಸಂಪಾದಕೀಯ ಮಂಡಳಿ ಸದಸ್ಯರು

೧. **ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, 'ರಾಗಿಣಿ', ಹಂಪಿನಗರ, ಬೆಂಗಳೂರು.

೨. **ಪ್ರೊ ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್. ಬಿ. ಕಾಲೋನಿ, ಯಲಹಂಕ, ಬೆಂಗಳೂರು.

೩. **ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

### ಮುಖ್ಯ ಸಂಯೋಜಕರು

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ. ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೫೬೦೦೮೫.

### ಸಲಹೆ ಮತ್ತು ಮಾರ್ಗದರ್ಶನ

೧. **ಶ್ರೀ ನಾಗೇಂದ್ರಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫.

೨. **ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೫೬೦೦೮೫.

### ಕಾರ್ಯಕ್ರಮ ಸಂಯೋಜಕರು

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

# ಮುನ್ನುಡಿ

೨೦೦೫ ರ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿಗೆ ಅನುಗುಣವಾಗಿ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ನೆಯ ಸಾಲಿನಿಂದ ಒಂದರಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ಹನ್ನೊಂದು ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಏಳು ಮಾಧ್ಯಮಗಳಲ್ಲಿ ಕೋರ್ ವಿಷಯಗಳನ್ನು ರಚನೆ ಮಾಡಲಾಗುತ್ತಿದೆ. ೨೦೦೫ ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳನ್ನು ಕೆಳಗಿನ ಮೂಲಭೂತ ವಿಧಾನಗಳ ಆಧಾರದ ಮೇಲೆ ರಚಿಸಲಾಗಿದೆ. ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach).

ಪಠ್ಯಪುಸ್ತಕಗಳಲ್ಲಿರುವ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಭಾರತೀಯ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾಪೂರಕ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು

ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆ ಹಾಗೂ ಮಕ್ಕಳ ಅಭ್ಯಾಸ ಪುಸ್ತಕಗಳಲ್ಲಿ ಅನೇಕ ಚಟುವಟಿಕೆಗಳನ್ನು ಮಕ್ಕಳಿಂದ ಮಾಡಿಸಿ ಅವರಲ್ಲಿ ಸಂಬಂಧಪಟ್ಟ ಸಾಮರ್ಥ್ಯ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ(learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ ( learning to do) ಯನ್ನು ವೃದ್ಧಿಮಾಡುತ್ತದೆ. ಪ್ರತಿ ಘಟಕದಲ್ಲಿಯೂ ಕೆಲವು ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಜೋಡಿಸಲಾಗಿದೆ. ಅವುಗಳನ್ನು ಮಕ್ಕಳೇ ಕಂಡುಹಿಡಿದು, ಚರ್ಚಿಸಿ ಜೀವನದಲ್ಲಿ ಅವುಗಳ ಅರಿವನ್ನುಂಟುಮಾಡಿಕೊಳ್ಳುವಂತೆ ಮಾಡಬೇಕು.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ ಮತ್ತು ಸಂಪಾದಕ ಮಂಡಳಿಯ ಸದಸ್ಯರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕವಿಗಳ ಹಾಗೂ ಸಾಹಿತಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಇದಕ್ಕೆ ತಮ್ಮ ಒಪ್ಪಿಗೆಯನ್ನು ನೀಡಿರುವ ಕವಿಗಳಿಗೆ ಹಾಗೂ ಸಾಹಿತಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.



**ಪ್ರೊ. ಜಿ.ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಕ್ರಮ ಪರಿಷ್ಕರಣೆ ಹಾಗೂ
ಪಠ್ಯಪುಸ್ತಕ ರಚನೆ ಕ.ಪ.ಪು. ಸಂಘ
ಬೆಂಗಳೂರು.

**ನಾಗೇಂದ್ರಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ
ಬೆಂಗಳೂರು

# ಸಮಕ್ಷಮ

## ಓದಿಗೆ ಮುನ್ನ .......

ಮಾತೃ ಭಾಷಾ ಬೋಧನೆ ಮತ್ತು ಅನ್ಯ ಭಾಷಾ ಬೋಧನೆಗಿರುವ ವ್ಯತ್ಯಾಸವನ್ನು ಗಮನದಲ್ಲಿಟ್ಟುಕೊಂಡು ಕಳೆದ ಹತ್ತು ವರ್ಷಗಳ ನಂತರ ಕರ್ನಾಟಕರಾಜ್ಯ ಪಠ್ಯಪುಸ್ತಕ ಸಂಘ ನೂತನ ಪಠ್ಯಪುಸ್ತಕಗಳನ್ನು ರಚಿಸಲು ತಜ್ಞರ ಸಮಿತಿಯನ್ನು ನೇಮಿಸಿರುವುದು ಸಂತಸದ ವಿಚಾರವಾಗಿದೆ. ವಿದ್ಯಾರ್ಥಿಗಳು ತಮ್ಮ ಮಾತೃ ಭಾಷೆಯ ಜೊತೆಗೆ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯಲು ಸಹಕಾರಿಯಾಗುವಂತೆ ಸರಳವಾಗಿ ಹಾಗೂ ವೈಜ್ಞಾನಿಕವಾಗಿ ಪಠ್ಯಕ್ರಮವನ್ನು ರೂಪಿಸಲಾಗಿದೆ. ಇಲ್ಲಿ ಪಠ್ಯಗಳ ಜೊತೆಗೆ ಭಾಷಾಭ್ಯಾಸವನ್ನು ತಾರ್ಕಿಕವಾಗಿ ಮತ್ತು ಕ್ರಿಯಾತ್ಮಕವಾಗಿ ಅಳವಡಿಸಲಾಗಿದೆ.

ಭಾಷೆಯನ್ನು ಕಲಿಯುವ ಪ್ರಕ್ರಿಯೆ ಯಾಂತ್ರಿಕವಾಗಿರದೆ ಅದು ಪರಿಸರದಲ್ಲಿ ಒಂದಾಗಿ ಕಲಿತ ಅಭ್ಯರ್ಥಿ ಅದರ ಸದುಪಯೋಗ ಪಡೆಯುವಂತಾಗಬೇಕು. ವಿದ್ಯಾರ್ಥಿಗಳು ಭಾಷೆಯನ್ನು ಕಲಿಯಲು ಸಹಕಾರಿಯಾಗುವಂತೆ ಸದಭಿರುಚಿ ಮೂಡುವಂತಹ ಪಾಠಗಳನ್ನು ಆಯ್ಕೆ ಮಾಡಲಾಗಿದೆ. ಪದ್ಯ ಹಾಗೂ ಗದ್ಯ ಪಾಠಗಳಿಗೆ ಸಮಾನ ಸ್ಥಾನ ಕಲ್ಪಿಸುವುದರ ಜೊತೆಗೆ ಪರಿಸರದ ಸಂಸ್ಕೃತಿ, ಪರಸ್ಪರ ಸಹಕಾರ, ಇತರ ಧರ್ಮಗಳ ಬಗ್ಗೆ ಗೌರವ ಮೂಡುವಂತೆ ಪಠ್ಯ ವಸ್ತುವನ್ನು ಸಂಯೋಜಿಸಲಾಗಿದೆ. ಈ ಪಠ್ಯಪುಸ್ತಕ ಕಲಿಯುವ ವಿದ್ಯಾರ್ಥಿಗಳಿಗೂ ಕಲಿಸುವ ಶಿಕ್ಷಕರಿಗೂ ಉಪಯುಕ್ತವಾದರೆ ನಮ್ಮ ಶ್ರಮ ಸಾರ್ಥಕವಾಗುತ್ತದೆ.

ಪಠ್ಯಪುಸ್ತಕ ರಚನೆಯಲ್ಲಿ ಸಹಕಾರ ನೀಡಿ, ಅದನ್ನು ಅನೇಕ ಸಲ ತಿದ್ದಿ ತೀಡಿ ಅಂದವಾಗಿ ರೂಪಗೊಳ್ಳುವಂತೆ ಪ್ರಯತ್ನಿಸಿದ ಪಠ್ಯ ರಚನಾ ಸಮಿತಿಯ ಎಲ್ಲ ಸದಸ್ಯರನ್ನು, ಪರಿಶೀಲಕರನ್ನೂ ಹಾಗೂ ಪಠ್ಯ ರಚನೆಯ ಸಂದರ್ಭದಲ್ಲಿ ಮುಕ್ತವಾದ ಸಲಹೆ ಸಹಕಾರ ನೀಡಿದ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರಿಗೂ, ಸಂಯೋಜಕರಿಗೂ ಉಪನಿರ್ದೇಶಕರು ಹಾಗೂ ಹಿರಿಯ ಸಹಾಯಕ ನಿರ್ದೇಶಕರಿಗೆ ನಮ್ಮ ಕೃತಜ್ಞತೆಗಳು.

**ಪ್ರೊ. ಹೆಚ್.ಎಂ. ಮಹೇಶ್ವರಯ್ಯ**
ಅಧ್ಯಕ್ಷರು
ಪಠ್ಯಪುಸ್ತಕ ರಚನಾ ಸಮಿತಿ

# ಪರಿವಿಡಿ

# ೧. ಐಕ್ಯಗಾನ (ಪದ್ಯ)

– ಡಾ॥ ಜಿ.ಎಸ್. ಶಿವರುದ್ರಪ್ಪ



ಒಂದೇ ಒಂದೇ, ನಾವೆಲ್ಲರು ಒಂದೇ,
ಈ ದೇಶದೊಳೆಲ್ಲಿದ್ದರು
ಭಾರತ ನಮಗೊಂದೇ–

ಹಲವು ಕೊಂಬೆಗಳ ಚಾಚಿಕೊಂಡರೂ
ಮರಕ್ಕೆ ಬುಡ ಒಂದೇ
ಸಾವಿರ ನದಿಗಳು ಹೇಗೆ ಹರಿದರೂ
ಕೂಡುವ ಕಡಲೊಂದೇ.

ಇರುಳಿಗೆ ಸಾಸಿರ ಚಿಕ್ಕೆಗಳಿದ್ದರು
ಹಗಲಿಗೆ ರವಿ ಒಂದೇ
ಅಗಣಿತ ಗ್ರಹಮಂಡಲಗಳ ಚಲನೆಗೆ
ಆಕಾಶವು ಒಂದೇ.

ನೂರುಬಗೆಯ ಆರಾಧನೆಯಿದ್ದರು
ದೇವರು ಎಲ್ಲರಿಗೊಂದೇ,
ಹಲವು ಬಣ್ಣಗಳ ಹಸುಗಳು ಕರೆಯುವ
ಹಾಲಿನ ಬಿಳುಪೊಂದೇ.

ನಡೆ–ನುಡಿ ಭೇದಗಳೆಷ್ಟೇ ಇದ್ದರು
ಬದುಕುವ ಜನ ಒಂದೇ,
ನೆಳಲು–ಬೆಳಕುಗಳ ರೆಕ್ಕೆಯ ಬಿಚ್ಚುತ
ಹಾರಾಡುವ ಧ್ವಜ ಒಂದೇ.



## ಕೃತಿ–ಕರ್ತೃ ಪರಿಚಯ



ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪ ಅವರು (ಜನನ ೧೯೨೬) ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕು ಈಸೂರಿನವರು. ಮೈಸೂರು, ಉಸ್ಮಾನಿಯಾ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿರುವ ಇವರು ಕವಿಯಾಗಿ, ವಿಮರ್ಶಕರಾಗಿ ಪ್ರಸಿದ್ಧರಾಗಿದ್ದಾರೆ. 'ಸೌಂದರ್ಯ ಸಮೀಕ್ಷೆ, ದೀಪದ ಹೆಜ್ಜೆ, ಸಾಮಗಾನ, ಕಾರ್ತೀಕ, ಅನಾವರಣ, ಚೆಲುವು–ಒಲವು, ಗೋಡೆ, ತೆರೆದ ದಾರಿ, ಮಾಸ್ಕೋದಲ್ಲಿ ಇಪ್ಪತ್ತೆರಡು ದಿನಗಳು, ಕಾವ್ಯಾರ್ಥ ಚಿಂತನ' ಇವರ ಪ್ರಮುಖ ಕೃತಿಗಳು. 'ಕಾವ್ಯಾರ್ಥ ಚಿಂತನ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ

ಪ್ರಶಸ್ತಿ ಪಡೆದಿರುವ ಜಿ.ಎಸ್.ಎಸ್ ರವರು **'ಪಂಪ ಪ್ರಶಸ್ತಿ, ನೃಪತುಂಗಪ್ರಶಸ್ತಿ'**ಗಳಿಗೆ ಭಾಜನರಾಗಿದ್ದಾರೆ. ಹಾಗೂ **ರಾಷ್ಟ್ರಕವಿ** ಪುರಸ್ಕಾರವನ್ನು ಪಡೆದಿದ್ದಾರೆ. ಶ್ರೀಯುತರು ೧೯೯೨ರಲ್ಲಿ ದಾವಣಗೆರೆಯಲ್ಲಿ ನಡೆದ ೬೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಪ್ರಕೃತ 'ಐಕ್ಯಗಾನ' ಕವಿತೆಯನ್ನು ಇವರ 'ಪ್ರೀತಿ ಇಲ್ಲದ ಮೇಲೆ' ಕವನ ಸಂಕಲನದಿಂದ ಆಯ್ಕೆ ಮಾಡಲಾಗಿದೆ.

## – ಓದಿ ತಿಳಿಯಿರಿ –

| | | | | | |
|---|---|---|---|---|---|
| ಇರುಳು | – | ಕತ್ತಲೆ, ರಾತ್ರಿ | ಬುಡ | – | ಬೇರು, ತಳ, ಮೂಲ |
| ಚಿಕ್ಕೆ | – | ನಕ್ಷತ್ರ, ತಾರೆ | ಸಾಸಿರ | – | ಸಾವಿರ, ಸಹಸ್ರ |
| ಆರಾಧನೆ | – | ಪೂಜೆ, ಧ್ಯಾನ | ನೆಳಲು | – | ನೆರಳು, ಛಾಯೆ |
| ಅಗಣಿತ | – | ಅಸಂಖ್ಯ, ಲೆಕ್ಕವಿಲ್ಲದಷ್ಟು | ಚಾಚು | – | ಹರಡು, ವಿಸ್ತರಿಸು |

## – ಗಮನಿಸಿರಿ –

| | | |
|---|---|---|
| ಸಾಸಿರ ಚಿಕ್ಕೆ | – | ಸಾವಿರಾರು ನಕ್ಷತ್ರಗಳು |
| ಅಗಣಿತ ಗ್ರಹಮಂಡಲ | – | ಅಸಂಖ್ಯಾತ ಗ್ರಹಗಳ ಮತ್ತು ಉಪಗ್ರಹಗಳ ಗುಂಪು |

## – ಅಭ್ಯಾಸ –

**ಅ. ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ:**

೧. ಸಾವಿರ ನದಿಗಳು ಹೇಗೆ ಹರಿದರೂ ಕೂಡುವ ______

೨. ______ ಗ್ರಹಮಂಡಲಗಳ ಚಲನೆಗೆ ಆಕಾಶವು ಒಂದೇ

೩. ನಡೆನುಡಿ ______ ಗಳೆಷ್ಟೇ ಇದ್ದರು ಬದುಕುವ ಜನ ಒಂದೇ

೪. ನೂರು ಬಗೆಯ ______ ದೇವರು ಎಲ್ಲರಿಗೊಂದೇ

**ಆ. ಗುಂಪಿಗೆ ಸೇರದ ಪದವನ್ನು ಆಯ್ದು ಬರೆಯಿರಿ:**

೧. ಕೊಂಬೆ, ಎಲೆ, ಮರ, ಸಾಗರ

೨. ಚಿಕ್ಕೆ, ರವಿ, ಭೂಮಿ, ಆಕಾಶ

೩. ನದಿ, ಹಳ್ಳ, ದೋಣಿ, ಕಡಲು

೪. ಧ್ವಜ, ದೇಶ, ಬಾವುಟ, ನಿಶಾನೆ

೫. ಇರುಳು, ರವಿ, ಹಗಲು, ಸಂಜೆ

ಇ. ಈ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಬಳಸಿರಿ:

ಆಕಾಶ, ಚಲನೆ, ಹರಿಸು, ಅಗಣಿತ, ಆರಾಧನೆ, ಕಡಲು, ಬಿಳುಪು, ಹಾರಾಡು.

ಈ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:

೧. ಮರಕ್ಕೆ ಆಧಾರ ಯಾವುದು?

೨. ಸಾವಿರ ನದಿಗಳು ಎಲ್ಲಿ ಸೇರುತ್ತವೆ?

೩. ಗ್ರಹಮಂಡಲಗಳ ಚಲನೆಗೆ ಆಧಾರ ಯಾವುದು?

೪. ಚಿಕ್ಕೆಗಳು ಯಾವಾಗ ಕಾಣಿಸುತ್ತವೆ?

೫. ಹಾರಾಡುವ ಧ್ವಜ ಹೇಗೆ ಕಾಣಿಸುತ್ತದೆ?

ಉ. ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:

೧. ಪ್ರಕೃತಿಯಲ್ಲಿನ ಮರ ನೀಡುವ ಸಂದೇಶ ಯಾವುದು?

೨. ಕಡಲು ಏನನ್ನು ಸೂಚಿಸುವುದೆಂದು ಕವಿ ಹೇಳುತ್ತಾರೆ?

೩. ಹಾಲಿನ ಬಿಳುಪನ್ನು ಕವಿ ಯಾವುದಕ್ಕೆ ಹೋಲಿಸುತ್ತಾರೆ?

೪. ಕವಿ ಧ್ವಜವನ್ನು ಯಾವುದಕ್ಕೆ ಹೋಲಿಸಿದ್ದಾರೆ?

ಊ. ಹೊಂದಿಸಿ ಬರೆಯಿರಿ:

| ಅ | ಆ |
|---|---|
| ೧. ಹಲವು ಕೊಂಬೆಗಳ ಚಾಚಿಕೊಂಡರೂ | ೧. ಹಗಲಿಗೆ ರವಿ ಒಂದೇ |
| ೨. ಇರುಳಿಗೆ ಸಾಸಿರ ಚಿಕ್ಕೆಗಳಿದ್ದರು | ೨. ಹಾಲಿನ ಬಿಳುಪೊಂದೇ |
| ೩. ಹಲವು ಬಣ್ಣಗಳ ಹಸುಗಳು ಕರೆಯುವ | ೩. ದೇವರು ಎಲ್ಲರಿಗೊಂದೇ |
| ೪. ನೂರು ಬಗೆಯ ಆರಾಧನೆ ಇದ್ದರು | ೪. ಮರಕ್ಕೆ ಬುಡ ಒಂದೇ |
| | ೫. ಧ್ವಜ ಒಂದೇ |

ಋ. ವಿರುದ್ಧಾರ್ಥಕ ಪದ ಬರೆಯಿರಿ:

ಹಗಲು x

ನೆರಳು x

## – ಭಾಷಾಭ್ಯಾಸ –

**ಅ. ಈ ಪದಗಳನ್ನು ಬಿಡಿಸಿ ಬರೆಯಿರಿ:**

***ಮಾದರಿ : ನಮಗೊಂದೇ – ನಮಗೆ + ಒಂದೇ***

ಆರಾಧನೆಯಿದ್ದರೂ; ಕಡಲೊಂದೇ; ಹಾರಾಡುವ; ಬಿಳುಪೊಂದೇ; ನಾವೆಲ್ಲರು

ಭೇದಗಳೆಷ್ಟೇ; ಎಲ್ಲರಿಗೊಂದೇ; ಚಿಕ್ಕೆಗಳಿದ್ದರು; ಎಲ್ಲಿದ್ದರೂ;

**ಆ. ಈ ಪದಗಳ ವಿವಿಧ ಅರ್ಥಗಳನ್ನು ಗಮನಿಸಿ, ಇಂತಹ ಪದಗಳನ್ನು ಸಂಗ್ರಹಿಸಿ:**

ಸಾರು – ಘೋಷಿಸು, ಎಸರು, ಮೇಲೋಗರ, ಹತ್ತಿರ ಹೋಗು

ಹರಿ – ವಿಷ್ಣು, ಛಿದ್ರಗೊಳಿಸು, ನಡೆ, ಕೀಳು, ಕೊಯ್ಯು

ಸಾಗು – ಮುಂದೆ ನಡೆ, ಕೃಷಿ, ಜರುಗು

ತರು – ಮರ, ತಾ

ಕೊಡೆ – ಛತ್ರಿ, ಕೊಡುವುದಿಲ್ಲ

ಅರಿ – ಶತ್ರು, ತಿಳಿದುಕೋ

ಮಿಡಿ – ಚಿಗುರುಕಾಯಿ, ಸ್ಪಂದಿಸು, ಬೆರಳಿನಿಂದ ಮೀಟು

ಹಿಂಡು – ಗುಂಪು, ಹಿಸುಕು

**ಇ. ಈ ಪದ್ಯದ ಕೊನೆಯ ೮ ಸಾಲುಗಳನ್ನು ಕಂಠಪಾಠ ಮಾಡಿರಿ:**

**ಈ. ಈ ಪದ್ಯವನ್ನು ಗದ್ಯ ರೂಪದಲ್ಲಿ ಬರೆಯಿರಿ:**

ನಾವು ಎಳೆಯರು ನಾವು ಗೆಳೆಯರು
ಹೃದಯ ಹೂವಿನ ಹಂದರ
ನಾಳೆ ನಾವೇ ನಾಡ ಹಿರಿಯರು
ನಮ್ಮ ಕನಸದೊ ಸುಂದರ

**ಉ. ಖಾಲಿ ಜಾಗದಲ್ಲಿ 'ರ' ಅಕ್ಷರವನ್ನು ಸೇರಿಸಿ, ಪದವನ್ನು ಪೂರ್ಣಗೊಳಿಸಿ:**

| | | | |
|---|---|---|---|
| ಭಾ__ತ | ಶ__ತ್ | ಬ___ | ಚಾಮ__ |
| ಮ__ | ಕ__ | ಕಿ__ಣ | ಖಾ___ |
| ಸಾವಿ__ | ಭಾ__ | ಶ__ಣ | ಹಾ___ |

ಊ.ಗದ್ಯವನ್ನು ಓದಿ ಬಳಸಲಾದ ಚಿಹ್ನೆಗಳ ಅರ್ಥವನ್ನು ಗ್ರಹಿಸಿ:

'ಎಷ್ಟು ಸುಂದರವಾದ ನೋಟ !' ಎಂದು ಸೀತೆಯು ಉದ್ಗಾರ ಮಾಡಿದಳು. ಹೊನ್ನಿನ ಬಣ್ಣದ ಜಿಂಕೆ, ಅವಳ ಮನಸ್ಸನ್ನು ಸೂರೆಗೊಂಡಿತ್ತು. ಕಾಡಿನ ಜೀವನ ಅವಳಿಗೆ ಬೇಸರವನ್ನಾಗಲೀ, ದುಃಖವನ್ನಾಗಲೀ ತಂದಿರಲಿಲ್ಲ. ಬದಲಿಗೆ ಅಲ್ಲಿ ಕಾಣುವ ರಮ್ಯ ನೋಟಗಳನ್ನು ಅವಳು ಸಂತೋಷದಿಂದ ಅನುಭವಿಸುತ್ತಿದ್ದಳು. ಅಷ್ಟರಲ್ಲಿ ಅಲ್ಲಿಗೆ ಬಂದ ರಾಮನಿಗೆ ಹೇಳಿದಳು– 'ನನಗೆ ಆ ಹೊಂಬಣ್ಣದ ಜಿಂಕೆ ಬೇಕೇ ಬೇಕು'. 'ಆ ಜಿಂಕೆ–ಯೇ ಏಕೆ ಬೇಕು? ಬೇರೊಂದು ಹಿಡಿದು ತರಲೇ?' ಎಂದು ರಾಮನು ಹೇಳಿದಾಗ, ಸೀತೆ ಅದಕ್ಕೆ ಒಪ್ಪಲಿಲ್ಲ.

**ಈ ಸಂಭಾಷಣೆಗೆ ಬಳಸಲಾದ ಲೇಖನ ಚಿಹ್ನೆಗಳು –**

| | | |
|---|---|---|
| ಉದ್ಧರಣ | – | ' ' |
| ಪ್ರಶ್ನಾರ್ಥಕ | – | ? |
| ಪೂರ್ಣ ವಾಕ್ಯ ವಿರಾಮ | – | . |
| ಮುಂದುವರಿದ ಭಾಗ ಅಥವಾ ಪದ | – | , |
| ಭಾವಸೂಚಕ | – | ! |

ಋ. ಈ ವಾಕ್ಯವನ್ನು ವಾಕ್ಯ ಚಿಹ್ನೆಗಳಿಂದ ಪೂರ್ಣಗೊಳಿಸಿ:

ಸೀತೆ ನಿನಗಾಗಿ ಜಿಂಕೆಯನ್ನು ತರಲು ನಾನೀಗಲೇ ಹೊರಡುತ್ತೇನೆ ಎಂದು ರಾಮನು ಹೇಳಿದನು ಲಕ್ಷ್ಮಣನನ್ನು ಕೂಗಿ ಕರೆಯುತ್ತಾ ಲಕ್ಷ್ಮಣಾ ಎಲ್ಲಿದ್ದೀಯ ನೀನು ಸೀತೆಯ ರಕ್ಷಣೆಗಾಗಿ ಆಶ್ರಮದಲ್ಲೇ ಇರು ನಾನೀಗಲೇ ಹೊರಡುವೆನು ಎಂದು ರಾಮನು ಹೊರಟನು ಮನಸ್ಸಿನಲ್ಲೇ ಜಿಂಕೆಯು ಸಿಗಬಾರದೇ ಎಂದುಕೊಂಡನು

## – ಚಟುವಟಿಕೆ –

೧. 'ಐಕ್ಯಗಾನ' ಕವಿತೆಯನ್ನು ರಾಗವಾಗಿ ಹಾಡಿರಿ.

೨. ಭಾವೈಕ್ಯದ ಸಂದೇಶ ಬೀರುವ ಇತರ ಕವಿತೆಗಳನ್ನು ಸಂಗ್ರಹಿಸಿರಿ.

೩. ಡಾ॥ ಜಿ.ಎಸ್. ಶಿವರುದ್ರಪ್ಪನವರ ಜನಪ್ರಿಯ ಗೀತೆಗಳನ್ನು ಸಂಗ್ರಹಿಸಿರಿ.

☆ ☆ ☆ ☆ ☆

# ೨. ಬುದ್ಧನ ಸಲಹೆ (ಗದ್ಯ)

– ಡಾ॥ ನಿರುಪಮಾ

ಬಹಳ ವರುಷಗಳ ಹಿಂದಿನ ಮಾತು. ಭಾರತದ ಉತ್ತರ ಭಾಗದಲ್ಲಿ ಕಪಿಲವಸ್ತುವೆಂಬ ನಗರವಿತ್ತು. ಅದನ್ನು ಶಾಕ್ಯರೆಂಬ ಅರಸು ಮನೆತನದವರು ಆಳುತ್ತಿದ್ದರು. ಶಾಕ್ಯರ ಅರಸ ಶುದ್ಧೋಧನನಿಗೆ ಸಿದ್ಧಾರ್ಥನೆಂಬ ಮಗ ಹುಟ್ಟಿದನು. ಆತ ಬೆಳೆದ ಮೇಲೆ ಸನ್ಯಾಸ ಸ್ವೀಕರಿಸಿ ಭಗವಾನ್ ಬುದ್ಧನಾದನು.

ಈಗ ನೇಪಾಳ ದೇಶದಲ್ಲಿ ಸೇರಿಹೋಗಿರುವ ಕಪಿಲವಸ್ತುನಗರದ ಸಮೀಪದಲ್ಲಿ ಹೇಮಕೂಟಪರ್ವತಗಳಿವೆ. ಆ ಪರ್ವತದಲ್ಲಿ ಹುಟ್ಟಿದ ಗಂಗಾನದಿ ದಕ್ಷಿಣಕ್ಕೆ ಕಾಶೀನಗರದವರೆಗೆ ಹರಿದು ನಂತರ ಕವಲಾಗಿ ಬಂಗಾಳ ಸಮುದ್ರಕ್ಕೆ ಸೇರುತ್ತದೆ, ಆ ಕಾಲದಲ್ಲಿ ಗಂಗಾನದಿಯ ಎರಡು ಬದಿಗಳಲ್ಲಿ ಎರಡು ರಾಜ್ಯಗಳಿದ್ದವು. ಒಂದು ವತ್ಸ ಇನ್ನೊಂದು ಮಗಧ ರಾಜ್ಯ, ಈ ನದಿಯಿಂದ ಈ ಎರಡೂ ರಾಜ್ಯಗಳು ಉಪಯೋಗ ಪಡೆದು ಸುಭಿಕ್ಷವಾಗಿದ್ದವು.

ಈ ಎರಡೂ ರಾಜ್ಯಗಳವರು ಆ ನದಿಯನ್ನು ತಾಯಿಯಂತೆ ಪೂಜಿಸುತ್ತಿದ್ದರು. ಆ ನದಿಯ ನೀರಿನಿಂದ ಎರಡೂ ರಾಜ್ಯಗಳ ನೆಲ ಸಸ್ಯಶ್ಯಾಮಲವಾಗಿತ್ತು. 'ಎತ್ತ ನೋಡಿದರೂ ಹಸಿರು ತುಂಬಿ ಬೆಳೆ ಬೆಳೆದು ಸುಭಿಕ್ಷದಿಂದ ಜನರು ಸುಖವಾಗಿದ್ದರು. ಇವರೆಲ್ಲರೂ ಗಂಗಾನದಿಯನ್ನು ತಮಗೆ ಅನ್ನ ನೀಡುವ ತಾಯಿ ಎನ್ನುತ್ತಿದ್ದರು. ಆದರೆ ಅವರಿಬ್ಬರನ್ನೂ ಕ್ರಮೇಣ ಸ್ವಾರ್ಥ ಆವರಿಸಿತು. ಈ ನದಿಯ ಮೇಲೆ ತಮ್ಮ ಸಂಪೂರ್ಣ ಅಧಿಕಾರ ಸ್ಥಾಪಿಸಬೇಕೆಂಬ ದುರಾಸೆ ಈ ಎರಡೂ ರಾಜ್ಯಗಳ ರಾಜರಿಗೆ ಉಂಟಾಯಿತು. ದಿನ ಕಳೆದಂತೆ ಈ ಸ್ವಾರ್ಥ ಹೆಮ್ಮರವಾಗಿ ಬೆಳೆದು ಎರಡೂ ರಾಜ್ಯಗಳವರು ಯುದ್ಧಕ್ಕೆ ಸಿದ್ಧವಾಗುವ ಉತ್ಕಟ ಪರಿಸ್ಥಿತಿ ಬೆಳೆಯಿತು.

ಅವರು ಯುದ್ಧಕ್ಕೆ ನಿಂತಾಗ ಬುದ್ಧ ಭಗವಾನ್ ಅಲ್ಲಿಗೆ ಬಂದ. ಆತ ಯುದ್ಧಕ್ಕೆ ಸಿದ್ಧವಾದ ಎರಡೂ ಕಡೆಯ ಸೈನ್ಯಗಳನ್ನು ನೋಡಿ ಅವುಗಳ ನಡುವೆ ನಿಂತುಕೊಂಡ. ಬುದ್ಧದೇವನನ್ನು ನೋಡಿ ಎರಡೂ ಕಡೆಯವರು ಸ್ವಲ್ಪ ಹಿಂದಕ್ಕೆ ಸರಿದರು.

ಬುದ್ಧದೇವನು ಇಬ್ಬರೂ ರಾಜ–ಮಂತ್ರಿಗಳನ್ನು ಹಾಗೂ ಇತರ ಅಧಿಕಾರಿಗಳನ್ನು ತನ್ನ ಬಳಿಗೆ ಕರೆದು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಕೇಳಿದ.

"ನೀವು ಯುದ್ಧ ಮಾಡಲು ಏಕೆ ಸಿದ್ಧರಾಗಿದ್ದೀರಿ?"

"ನಮ್ಮ ಜೀವನಾಧಾರವಾದ ಗಂಗಾನದಿಯ ನೀರಿಗಾಗಿ" – ಅವರೆಲ್ಲರೂ ಒಕ್ಕೊರಲಿನಿಂದ ಉತ್ತರವಿತ್ತರು.

"ನದಿಯ ನೀರು, ಮಾನವರಕ್ತ ಇವೆರಡರಲ್ಲಿ ಯಾವುದು ಹೆಚ್ಚು ಬೆಲೆಯುಳ್ಳದ್ದು?"

"ಮನುಷ್ಯನ ರಕ್ತ ನದಿ ನೀರಿಗಿಂತ ತುಂಬ ಬೆಲೆಯುಳ್ಳದ್ದು" ಎರಡೂ ಕಡೆಯವರಿಂದ ಉತ್ತರ ಬಂತು.

"ಹಾಗಾದರೆ ನೀವು ಕಡಿಮೆ ಬೆಲೆ ಇರುವ ನೀರಿಗಾಗಿ ಅದಕ್ಕಿಂತಲೂ ಅಮೂಲ್ಯವಾದ ರಕ್ತವನ್ನು ಹರಿಸಲು ಏಕೆ ಸಿದ್ಧರಾಗಿದ್ದೀರಿ?" ಎಂದು ಬುದ್ಧ ಪುನಃ ಪ್ರಶ್ನಿಸಿದ.

"ನಮ್ಮ ಜೀವಗಳಿಗೆ ಈ ಗಂಗಾನದಿಯ ನೀರು ತುಂಬಾ ಆವಶ್ಯಕವಲ್ಲವೇ?" ಎಂದು ಎರಡೂ ಕಡೆಯವರು ಕೇಳಿದರು.

"ನೀವು ಜೀವಿಸಬೇಕೆಂದಿದ್ದೀರಲ್ಲವೇ? ಮತ್ತೆ ಸಾಯಲೇಕೆ ಸಿದ್ಧರಾಗಿದ್ದೀರಿ?" ಎಂದು ಕೇಳಿದ ಬುದ್ಧ.

ಎರಡೂ ರಾಜ್ಯದ ಮಂತ್ರಿಗಳು ಹೀಗೆ ಹೇಳಿದರು:

"ಸ್ವಾಮಿ! ಎರಡೂ ರಾಜ್ಯಗಳ ನಡುವೆ ದ್ವೇಷ ಅಸೂಯೆಗಳಿಂದ ಪರಿಸ್ಥಿತಿ ವಿಷಮಿಸಿದೆ. ಇದಕ್ಕೆ ಪರಿಹಾರವೇ ಇಲ್ಲ. ಈಗ ಯುದ್ಧದ ಹೊರತು ಬೇರೆ ದಾರಿಯಿಲ್ಲ."

ಬುದ್ಧದೇವ ನಕ್ಕು – "ನೀವು ದ್ವೇಷದಿಂದ ದ್ವೇಷವನ್ನು ಜಯಿಸಲು ಹೋದರೆ ಕೊನೆಗೆ ನಿಮಗೆ ಉಳಿಯುವುದು ಈರ್ಷ್ಯೆಯೇ. ಇವುಗಳಿಂದ ಜೀವಿಗಳಿಗೆ ದುಃಖವೇ ಹೊರತು ಸುಖವಲ್ಲ. ಈಗ ಸುಖವಾಗಿರುವ ನೀವು ದುಃಖ ತಂದುಕೊಳ್ಳುವ ಮಾರ್ಗ ಇದು" ಎಂದಾಗ ಎರಡೂ ಕಡೆಯ ರಾಜರು ತೆಪ್ಪಗಾದರು. ಅವರು ಕೇಳಿದರು :

"ಹಾಗಾದರೆ ಏನು ಮಾಡಬೇಕೆನ್ನುತ್ತೀರಿ ಭಗವಾನ್?"





"ಮನುಷ್ಯ ಸುಖವಾಗಿ ಜೀವಿಸಲು ನೀರು, ಗಾಳಿ, ಆಹಾರ ಎಲ್ಲವೂ ಮುಖ್ಯವಾದಂತೆ ಶಾಂತಿಯೂ ಅಷ್ಟೇ ಮುಖ್ಯ. ಯುದ್ಧದಿಂದ ಶಾಂತಿ ನಾಶವಾಗುತ್ತದೆ. ನೀವೇ ಕೈಯಾರ ನಿಮ್ಮ ಸುಖ ನಾಶ

ಮಾಡಿಕೊಳ್ಳುವುದನ್ನು ಬಿಟ್ಟು ವಿವೇಕ ತಂದುಕೊಂಡು ಸುಖವಾಗಿರಿ. ಪ್ರಕೃತಿ ಜೀವಿಗಳಿಗೆ ವರವೇ ಹೊರತು ಶಾಪವಲ್ಲ. ಆ ವರವನ್ನು ಸರ್ವಮಾನವರೂ ಸಮಾನವಾಗಿ ಹಂಚಿಕೊಂಡಾಗ ಎಲ್ಲರಿಗೂ ಸುಖ ಶಾಂತಿ ಸಿಗುತ್ತದೆ" ಎಂದು ಬುದ್ಧದೇವ ಬೋಧಿಸಿದ. ಎರಡೂ ಕಡೆಯ ರಾಜರಿಗೆ ಈ ಸಲಹೆ ಸತ್ಯವೆನ್ನಿಸಿತು. ಎಲ್ಲರೂ ಬುದ್ಧದೇವನಿಗೆ ನಮಸ್ಕರಿಸಿ ಯುದ್ಧ ಬೇಡವೆಂದು ತಮ್ಮ ತಮ್ಮ ಊರಿಗೆ ಹೊರಟರು. ಅಂದಿನಿಂದ ಆ ಎರಡೂ ರಾಜ್ಯದ ಜನರು ಸ್ನೇಹದಿಂದ ಸುಖವಾಗಿದ್ದರು.

## ಕೃತಿ–ಕರ್ತೃ ಪರಿಚಯ



ಡಾ॥ ನಿರುಪಮಾ ಅವರು (ಜನನ ೧೯೩೩) ತುಮಕೂರು ಜಿಲ್ಲೆಯ ಹೊಳವನಹಳ್ಳಿಯವರು. ಸಂಸ್ಕೃತ, ತೆಲುಗು, ಕನ್ನಡ, ಇಂಗ್ಲಿಷ್, ಹಿಂದಿ, ಬಂಗಾಲಿ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ. ವಿವಿಧ ಭಾಷೆಗಳಲ್ಲಿಯ ಉತ್ತಮ ಕೃತಿಗಳನ್ನು ಕನ್ನಡಕ್ಕೆ ತಂದಿರುವುದು ಇವರ ವಿಶೇಷತೆಯಾಗಿದೆ.

ಅಮೃತಕಲಶ, ಪರಿತ್ಯಕ್ತೆ, ಭುವನವಿಜಯ – ಪ್ರಮುಖ ಕಾದಂಬರಿಗಳು; ಭಾರತೀಯ ನಾರಿ ನಡೆದು ಬಂದ ದಾರಿ, ಭಾವಮುಖಿ – ಸಣ್ಣ ಕತೆ; ರಣ ಹದ್ದು, ಅಧಿಕಾರಿಗಳ ಅವಾಂತ್ರ – ನಾಟಕ; ಮಕ್ಕಳ ಸಾಹಿತ್ಯ–೨೫ ಕೃತಿಗಳು; ಕರ್ನಾಟಕದ ಕವಯಿತ್ರಿಗಳು – ಸಂಪಾದಿತ – ಇವು ಅವರ ಮುಖ್ಯ ಬರಹಗಳು.

ಯೂನಿಸೆಫ್ ಮಕ್ಕಳ ಸಾಹಿತ್ಯ, ಶಾಶ್ವತಿ ಸದೋದಿತಾ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಅನುಪಮಾ ಪ್ರಶಸ್ತಿ, ಸಾಹಿತ್ಯ ಶಿರೋಮಣಿ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. 'ಬುದ್ಧನ ಸಲಹೆ' ಕಥೆಯನ್ನು 'ಶತಮಾನದ ಮಕ್ಕಳ ಸಾಹಿತ್ಯ' ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.



### – ಓದಿ ತಿಳಿಯಿರಿ –

| | | | |
|---|---|---|---|
| ಸುಭಿಕ್ಷೆ | – ಒಳ್ಳೆಯ ಕಾಲ, ಸಮೃದ್ಧಿ | ಸ್ವಾರ್ಥ | – ಸ್ವಪ್ರಯೋಜನ, ಸ್ವಹಿತ, ತನಗಾಗಿ |
| ದುರಾಸೆ | – ಅತಿ ಆಸೆ, ಕೆಟ್ಟ ಬಯಕೆ | ಉತ್ಕಟ | – ಅಧಿಕ, ಪ್ರಬಲವಾದ |
| ಸಲಹೆ | – ಬುದ್ಧಿವಾದ, ಮಾರ್ಗದರ್ಶನ | ವಿಷಮಿಸು | – ನಂಜಾಗು, ವಿಕೋಪಕ್ಕೆ ತಿರುಗು |
| ನೆರೆಹೊರೆ | – ಸುತ್ತಮುತ್ತ | ಈರ್ಷ್ಯೆ | – ಅಸೂಯೆ, ಹೊಟ್ಟೆಕಿಚ್ಚು |
| ಅಮೂಲ್ಯ | – ಬೆಲೆಕಟ್ಟಲಾಗದ | ದ್ವೇಷ | – ಹಗೆತನ, ವೈರತ್ವ |
| ವರ | – ಅನುಗ್ರಹ, ಶ್ರೇಷ್ಠ | ಅಸೂಯೆ | – ಹೊಟ್ಟೆಕಿಚ್ಚು |
| ತೆಪ್ಪಗೆ | – ಸುಮ್ಮನೆ, ಮಾತಿಲ್ಲದೆ | | |

**– ಗಮನಿಸಿರಿ –**

ತೆಪ್ಪಗಾಗು – ಸುಮ್ಮನಾಗು, ಏನೂ ತಿಳಿಯದಂತಾಗು

"ಮನುಷ್ಯನ ರಕ್ತ, ನದಿ ನೀರಿಗಿಂತ ಬೆಲೆಯುಳ್ಳದ್ದು"

**– ಅಭ್ಯಾಸ –**

**ಅ. ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ:**

೧. ಗಂಗಾನದಿಗೆ ವತ್ಸ ಮತ್ತು __________ ಎಂಬ ಎರಡು ರಾಜ್ಯಗಳು ನೆರೆಹೊರೆಯಲ್ಲಿದ್ದವು.

೨. ಭಾರತದ ಉತ್ತರ ಭಾಗದಲ್ಲಿ __________ ನಗರವಿತ್ತು.

೩. ನದಿಯ ನೀರಿಗಿಂತ ಬೆಲೆಯುಳ್ಳದ್ದು __________

೪. ಮನುಷ್ಯ ಜೀವಿಸಲು ಅನ್ನ, ನೀರು, ಗಾಳಿಯಷ್ಟೇ__________ ಮುಖ್ಯ.

೫. ಪ್ರಕೃತಿಯ ಜೀವಿಗಳಿಗೆ __________ ಹೊರತು ಶಾಪವಲ್ಲ.

೬. ಅಂದಿನಿಂದ ಎರಡೂ ರಾಜ್ಯಗಳ ಜನರು __________ ಸುಖವಾಗಿದ್ದರು.

**ಆ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಗಂಗಾನದಿ ಯಾವ ರಾಜ್ಯಗಳ ನಡುವೆ ಹರಿಯುತ್ತದೆ?

೨. ವತ್ಸ ಮತ್ತು ಮಗಧ ರಾಜ್ಯಗಳವರು ನದಿಯನ್ನು ಹೇಗೆ ಪೂಜಿಸುತ್ತಿದ್ದರು?

೩. ಯುದ್ಧದಿಂದ ಏನು ನಾಶವಾಗುತ್ತದೆ?

೪. ವತ್ಸ ಮತ್ತು ಮಗಧ ರಾಜ್ಯಗಳವರು ಯುದ್ಧಕ್ಕೆ ನಿಂತಾಗ ಬಂದವರಾರು?

**ಇ. ಈ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಗಂಗಾನದಿಯ ಬಗ್ಗೆ ವತ್ಸ ಮತ್ತು ಮಗಧ ರಾಜ್ಯಗಳವರ ಅಭಿಪ್ರಾಯವೇನಾಗಿತ್ತು?

೨. ವತ್ಸ ಮತ್ತು ಮಗಧ ರಾಜ್ಯಗಳವರು ನದಿ ನೀರಿಗಾಗಿ ಜಗಳವಾಡಲು ಕಾರಣವೇನು?

೩. ವತ್ಸ ಮತ್ತು ಮಗಧ ರಾಜ್ಯಗಳವರ ಸುಖ ಜೀವನಕ್ಕಾಗಿ ಬುದ್ಧನು ನೀಡಿದ ಉಪದೇಶವೇನು?

ಈ. ಕೆಳಗಿನ ಮಾತು ಯಾರು, ಯಾರಿಗೆ, ಯಾವಾಗ ಹೇಳಿದರು?

೧. "ನೀವು ಯುದ್ಧ ಮಾಡಲು ಏಕೆ ಸಿದ್ಧರಾಗಿದ್ದೀರಿ?"

೨. "ಮನುಷ್ಯನ ರಕ್ತ ನದಿ ನೀರಿಗಿಂತಲೂ ಬೆಲೆಯುಳ್ಳದ್ದು"

೩. "ನೀವು ಜೀವಿಸಬೇಕೆಂದಿದ್ದೀರಲ್ಲವೆ? ಮತ್ತೆ ಸಾಯಲೇಕೆ ಸಿದ್ಧರಾಗಿದ್ದೀರಿ?"

೪. "ಈಗ ಯುದ್ಧದ ಹೊರತು ಬೇರೆ ದಾರಿ ಇಲ್ಲ"

೫. "ಹಾಗಾದರೆ ಏನು ಮಾಡಬೇಕೆನ್ನುತ್ತೀರಿ, ಭಗವಾನ್?"

೬. "ಪ್ರಕೃತಿ ಜೀವಿಗಳಿಗೆ ವರವೇ ಹೊರತು ಶಾಪವಲ್ಲ"

## – ಭಾಷಾಭ್ಯಾಸ –



ಅ. ಮಾದರಿಯಂತೆ ಬಿಡಿಸಿ ಬರೆಯಿರಿ:

*ಮಾದರಿ : ಅವೆರಡು = ಅವು + ಎರಡು*

೧. ಅವರಿಬ್ಬರು = ಅವರು +

೨. ಅವರೆಲ್ಲರು = ಅವರು +

೩. ಇವರೆಲ್ಲರು = ಇವರು +

೪. ಇವರಿಬ್ಬರು = ಇವರು +

ಆ. ಮಾದರಿಯಂತೆ ಕೂಡಿಸಿ ಬರೆಯಿರಿ:

*ಮಾದರಿ : ನದಿ + ಇಂದ = ನದಿಯಿಂದ*

೧. ತಾಯಿ + ಇಂದ =

೨. ಶಾಂತಿ + ಇಂದ =

೩. ಮನೆ + ಇಂದ =

೪. ಗುಡಿ + ಇಂದ =

೫. ಮಳೆ + ಇಂದ =

ಇ. ಈ ಪದಗಳಿಗೆ ವಿರುದ್ಧಾರ್ಥಕ ಬರೆಯಿರಿ:

೧. ಮೌಲ್ಯ x

೨. ಸುಖ x

೩. ವರ x

೪. ಸತ್ಯ x

೫. ಪವಿತ್ರ x

ಈ. ಈ ಪದಗಳಿಗೆ ಅರ್ಥ ಬರೆದು ವಾಕ್ಯದಲ್ಲಿ ಉಪಯೋಗಿಸಿರಿ:

ಹಿಂಜರಿಕೆ, ವಿವೇಕ, ದ್ವೇಷ, ಸ್ವಾರ್ಥ, ಸಲಹೆ

## – ಕನ್ನಡ ವರ್ಣಮಾಲೆ ಪರಿಚಯ –



**ಕನ್ನಡ ವರ್ಣ ಮಾಲೆಯಲ್ಲಿ ಮೂರು ಭಾಗಗಳಿವೆ:**

೧. ಸ್ವರಗಳು; ೨. ಯೋಗವಾಹಗಳು; ೩. ವ್ಯಂಜನಗಳು

**ಸ್ವರಗಳು**

ಸರಳವಾಗಿ, ಸ್ವತಂತ್ರವಾಗಿ, ಸಹಜವಾಗಿ ಉಚ್ಚರಿಸಲು ಬರುವ ಅಕ್ಷರಗಳೇ ಸ್ವರಗಳು. ಇವುಗಳಲ್ಲಿ ಎರಡು ಪ್ರಕಾರಗಳು: (೧) ಹ್ರಸ್ವಸ್ವರ (೨) ದೀರ್ಘಸ್ವರ

**ಹ್ರಸ್ವಸ್ವರ** – ಒಂದು ಮಾತ್ರಾಕಾಲದಲ್ಲಿ ಉಚ್ಚರಿಸುವ ಅಕ್ಷರಗಳು –
ಅ, ಇ, ಉ, ಋ, ಎ, ಒ, = ೬

**ದೀರ್ಘಸ್ವರ** – ಎರಡು ಮಾತ್ರಾಕಾಲದಲ್ಲಿ ಉಚ್ಚರಿಸುವ ಅಕ್ಷರಗಳು –
ಆ, ಈ, ಊ, ಏ, ಐ, ಓ, ಔ, = ೭

೧೩

**ಯೋಗವಾಹಗಳು** – ಂ (ಅನುಸ್ವಾರ), ಃ (ವಿಸರ್ಗ) = ೨

## ವ್ಯಂಜನಗಳು

ಸ್ವರಗಳ ಸಹಾಯದಿಂದ ಉಚ್ಚರಿಸುವ ಅಕ್ಷರಗಳೇ ವ್ಯಂಜನಗಳು. ಇವುಗಳಲ್ಲಿ ಎರಡು ಪ್ರಕಾರಗಳು: ವರ್ಗೀಯ, ಅವರ್ಗೀಯ.

## ವರ್ಗೀಯ ವ್ಯಂಜನಗಳಲ್ಲಿ ಮೂರು ವಿಭಾಗಗಳಿವೆ:

೧) ***ಅಲ್ಪಪ್ರಾಣ*** ಸ್ವಲ್ಪ ಉಸಿರಿನಿಂದ ಉಚ್ಚರಿಸುವ ಅಕ್ಷರಗಳು
ಕ್, ಚ್, ಟ್, ತ್, ಪ್ ಹಾಗೂ ಗ್, ಜ್, ಡ್, ದ್, ಬ್
(ಪ್ರತಿ ವರ್ಗದಲ್ಲಿ ಒಂದು ಮತ್ತು ಮೂರನೆಯ ಅಕ್ಷರಗಳು) = ೧೦

೨) ***ಮಹಾಪ್ರಾಣ*** ಹೆಚ್ಚು ಉಸಿರಿನಿಂದ ಉಚ್ಚರಿಸುವ ಅಕ್ಷರಗಳು
ಖ್, ಛ್, ಠ್, ಥ್, ಫ್ ಹಾಗೂ ಘ್, ಝ್, ಢ್, ಧ್, ಭ್
(ಪ್ರತಿ ವರ್ಗದಲ್ಲಿ ಎರಡು ಮತ್ತು ನಾಲ್ಕನೆಯ ಅಕ್ಷರಗಳು) = ೧೦

೩) ***ಅನುನಾಸಿಕ*** ಮೂಗಿನ ಸಹಾಯದಿಂದ ಉಚ್ಚರಿಸುವ ಅಕ್ಷರಗಳು
ಙ, ಞ, ಣ, ನ, ಮ (ಪ್ರತಿ ವರ್ಗದ ಐದನೆಯ ಅಕ್ಷರಗಳು) = ೫

## ಅವರ್ಗೀಯ ವ್ಯಂಜನಗಳು

ಒಂದು ನಿರ್ದಿಷ್ಟ ವರ್ಗಕ್ಕೆ ಸೇರಿಸಲು ಸಾಧ್ಯವಾಗದ ವ್ಯಂಜನಗಳೇ ಅವರ್ಗೀಯ ವ್ಯಂಜನಗಳು.

ಯ್, ರ್, ಲ್, ವ್, ಶ್, ಷ್, ಸ್, ಹ್, ಳ್ = ೯

**ಒಟ್ಟು ೩೪**



### – ಭಾಷಾ ಅಭ್ಯಾಸ –

**೧. ಈ ಪದಗಳಲ್ಲಿ ಹ್ರಸ್ವಸ್ವರ, ದೀರ್ಘಸ್ವರಗಳನ್ನು ಗುರುತಿಸಿ ಬರೆಯಿರಿ:**

***ಮಾದರಿ : ಅವೆರಡರ = ಅ, ಆನದಿ = ಆ***

ಉಪಯೋಗ, ಅಭಿಪ್ರಾಯ, ಎತ್ತನೋಡಿದರು, ಆವರಿಸು, ಇಬ್ಬರು, ಏಕೆ, ಒಕ್ಕೊರಲು, ಉತ್ತರವಿತ್ತರು

**೨. ಅನುಸ್ವಾರ, ವಿಸರ್ಗಗಳನ್ನು ಗುರುತಿಸಿ ಬರೆಯಿರಿ:**

***ಮಾದರಿ : ಅಂದು = ಅಂ, ಪುನಃ = ನಃ***

ಗಂಗಾ, ನಿಂತಾಗ, ದುಃಖ, ಸಂಘ, ಮೂಲತಃ

೩. **ಈ ಪದಗಳಲ್ಲಿ ಬಿಟ್ಟಿರುವ ವ್ಯಂಜನ ಅಕ್ಷರಗಳನ್ನು ಕೊಟ್ಟಿರುವ ಅಕ್ಷರಗಳಲ್ಲಿ ಸರಿಯಾದುದನ್ನು ಆಯ್ದು ಪೂರ್ಣಗೊಳಿಸಿರಿ:**

***ಮಾದರಿ : ವಿವೇ ಕ, ಅಸಹ ಜ (ಕ, ಜ)***

ಸು____ವಾಗಿ, ಸ್ವಾ____ಮಾನ, ಭ____ವಾನ, ____ಮಗೆ

____ಡಿಮೆ, ಯುದ್ಧ____, ರಾ____ರಿಗೆ, ಮಾ____ಲು

(ಗ, ಖ, ಭಿ, ದ, ಕ್ಕೆ, ಕ, ನ, ಜ, ಡ)

೪. **ಈ ಪದಗಳಲ್ಲಿಯ ಅವರ್ಗೀಯ ವ್ಯಂಜನಗಳನ್ನು ಗುರುತಿಸಿ ಬರೆಯಿರಿ:**

***ಮಾದರಿ : ಕಾಯಕ = ಯ***

ವರವನ್ನು, ಹರಸು, ಕಡೆಯದಾಗಿ, ಸುಖವಲ್ಲ, ಸರಿದರು, ದ್ವೇಷದಿಂದ, ಬಹಳ, ಪರಿಹಾರ, ನಾಶ

## – ಚಟುವಟಿಕೆ –

೧. ಬುದ್ಧನ ಸಲಹೆ ಪಾಠದ ಆಧಾರದ ಮೇಲೆ ಒಂದು ರೂಪಕ ಸಿದ್ಧಪಡಿಸಿರಿ.

೨. ನೀರಿಗಿಂತ ರಕ್ತ ಮೇಲು – ಚರ್ಚಿಸಿರಿ.

೩. ಕಾವೇರಿ ನದಿ ವಿವಾದದ ಬಗ್ಗೆ ಶಿಕ್ಷಕರಿಂದ ತಿಳಿದುಕೊಳ್ಳಿರಿ.

೪. ಬುದ್ಧನಿಗೆ ಸಂಬಂಧಿಸಿದ ಸಣ್ಣ ಕತೆಗಳನ್ನು ಸಂಗ್ರಹಿಸಿ

☆ ☆ ☆ ☆ ☆

# ೩. ಜಾಣರು ಯಾರು? (ಪದ್ಯ)

– 'ಸಿಸು' ಸಂಗಮೇಶ





ಹುಲ್ಲನು ಹುಡುಕುತ ಕಾಡಲಿ ತಿರುಗುತ
ಹೊರಟಿತು ಊರಿನ ಕತ್ತೆ
ಮರದಾ ಕೆಳಗಡೆ ಹೊರಟಿರುವಾಗ
ಕಂಡಿತು ಹುಲ್ಲಿನ ಮೆತ್ತೆ ॥ ೧ ॥

ಟೊಂಗೆಯ ತುದಿಯಲಿ ಅಳಿಲೂ ಇಲಿಯೂ
ಕಾದುತ್ತಿದ್ದವು ಗೊತ್ತೆ?
ಜಾರಿದ ಇಲಿಯದು ಬೆನ್ನಲಿ ಬೀಳಲು
ಗಾಬರಿಯಾಯಿತು ಕತ್ತೆ ॥ ೨ ॥

ಯಾರೋ ಹೊಡೆಯುವರೆನ್ನುತ ಜಾಡಿಸಿ
ಹಾಕಿತು ಕಾಲಿನ ಲತ್ತೆ
ಲತ್ತೆಯ ಪೆಟ್ಟಿಗೆ ಇಲಿಮರಿ ಗಕ್ಕನೆ
ಟೊಂಗೆಯ ಸೇರಿತು ಮತ್ತೆ ! ॥ ೩ ॥

ಈ ಸಲ ಇಲಿಮರಿ ನೂಕಿತು ಅಳಿಲನು
ಬಿದ್ದಿತು ಕತ್ತೆಯ ಸುತ್ತೆ !
'ಹಿಡಿಯಿರಿ ಅವನನು ಬರುವೆನು ಈಗಲೇ !'
ಎನ್ನಲು ಅಂಜಿತು ಕತ್ತೆ ॥ ೪ ॥

ಕಾಲಿಗೆ ಬುದ್ಧಿಯ ಹೇಳಿತು – ಓಡಿತು
ಎನ್ನುತ "ನಾನು ಸತ್ತೆ !"
ಹೇಳಿರಿ ನೋಡುವ ಜಾಣರು ಯಾರು
ತಿನ್ನಲು ಕೊಡುವೆನು ಮತ್ತೆ ॥ ೫ ॥

## ಕೃತಿ–ಕರ್ತೃ ಪರಿಚಯ



'ಸಿಸು' ಸಂಗಮೇಶ (ಜನನ ೧೯೨೯) ಎಂಬ ಕಾವ್ಯ ನಾಮದಿಂದ ಪ್ರಸಿದ್ಧರಾಗಿರುವ ಸಂಗಮೇಶ ಸಿದ್ಧರಾಮಪ್ಪ ಮನಗೊಂಡ ಅವರು ವಿಜಯಾಪುರ ಜಿಲ್ಲೆಯ ಯರನಾಳದವರು. ೧೯೨೯ರಲ್ಲಿ ಜನಿಸಿದ ಅವರು ಶಿಕ್ಷಕರಾಗಿ ಜನಪ್ರಿಯತೆ ಪಡೆದಂತೆ ಮಕ್ಕಳ ಸಾಹಿತಿಯಾಗಿ ಮಾನ್ಯರಾಗಿದ್ದಾರೆ. ಭಾರತೀಯ ಸಾಹಿತ್ಯ ಭಂಡಾರವನ್ನು ಸ್ಥಾಪಿಸಿರುವ 'ಸಿಸು' ಸಂಗಮೇಶ ಅವರು ನನ್ನ ಮನೆ, ನನ್ನ ಗೆಳೆಯ, ಜಪಾನದ ಟಾರೊ, ಮೊಲದ ಮೂಗು ಮೊಂಡಾಯಿತು, ನರಿಯ ಪಜೀತಿ, ಯಾರು ಜಾಣರು?, ಕಳ್ಳ ಸಿಕ್ಕ, ದಾರಿಯ ಬುತ್ತಿ, ಕಾಡಿನ ಕಲಿಗಳು, ಶಾಲೆಗಿಂತ ಚೀಲ ಭಾರ, ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

'ನನ್ನ ಮನೆ ಮತ್ತು ನನ್ನ ಗೆಳೆಯ ಜಪಾನದ ಟಾರೊ' ಕೃತಿಗಳಿಗೆ ರಾಷ್ಟ್ರ ಪ್ರಶಸ್ತಿ ಲಭಿಸಿದೆ. ನನ್ನ ಗೆಳೆಯ ಎಸ್ಕಿಮೊ ಇಗ್ಲಿಯಕ್ ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಭಾಜನವಾಗಿದೆ. ಮೊಲದ ಮೂಗು ಮೊಂಡಾಯಿತು ಪುಸ್ತಕ ಕಾವ್ಯಾನಂದ ಪುರಸ್ಕಾರ ಪಡೆದಿದೆ.

ಪ್ರಕೃತ ಪದ್ಯಭಾಗವನ್ನು ಪ್ರೊ॥ ಸಿದ್ದಣ್ಣ ಬಿ. ಉತ್ನಾಳ್ ಸಂಪಾದಿಸಿದ್ದು, ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿರುವ 'ಸಿಸು' ಸಂಗಮೇಶ ಆಯ್ದ ಮಕ್ಕಳ ಸಾಹಿತ್ಯ ಗ್ರಂಥದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.



### – ಓದಿ ತಿಳಿಯಿರಿ –

| | | | | | |
|---|---|---|---|---|---|
| ಕಾಡು | – | ವನ, ಅರಣ್ಯ | ಮೆತ್ತೆ | – | ಹಾಸಿಗೆ, ದಿಂಬು |
| ಕಾದು | – | ಜಗಳ, ಹೋರಾಟ | ಗಾಬರಿ | – | ಹೆದರಿಕೆ, ಭಯ, ಆತಂಕ |
| ಜಾಡಿಸು | – | ನೂಕು, ಗುಡಿಸು | ಅಂಜು | – | ಹೆದರು, ಭಯಗೊಳ್ಳು |
| ಲತ್ತೆ | – | ಒದೆತ, ಹೊಡೆತ | ಟೊಂಗೆ | – | ಕೊಂಬೆ, ರೆಂಬೆ |
| ಮತ್ತೆ | – | ಪುನಃ, ಇನ್ನೊಮ್ಮೆ | | | |

## – ಗಮನಿಸಿರಿ –

ಲತ್ತೆ – ಒದೆತ – ಕತ್ತೆಯು ಎರಡೂ ಹಿಂಗಾಲುಗಳನ್ನೆತ್ತಿ ಜಾಡಿಸುವುದು

ಕಾಲಿಗೆ ಬುದ್ಧಿ ಹೇಳು – ಪರಿಸ್ಥಿತಿ ವಿರುದ್ಧವಾಗಿರುವುದನ್ನು ಗಮನಿಸಿ ಓಡುವುದು

## – ಅಭ್ಯಾಸ –

**ಅ. ಖಾಲಿ ಇರುವ ಸ್ಥಳವನ್ನು ಆವರಣದಲ್ಲಿರುವ ಸೂಕ್ತ ಪದವನ್ನು ಆಯ್ದು ತುಂಬಿರಿ:**

೧. ಕತ್ತೆ ಹುಲ್ಲನ್ನು ಹುಡುಕುತ್ತ ತಿರುಗುತ್ತಿರುವಾಗ ಮರದ ಕೆಳಗೆ ಕಂಡದ್ದು ______
(ಲತ್ತೆ, ಮೆತ್ತೆ, ಮತ್ತೆ, ಕತ್ತೆ)

೨. ಮರದ ________ ಅಳಿಲೂ ಇಲಿಯೂ ಕಾದುತ್ತಿದ್ದವು
(ತುದಿಯಲಿ, ನದಿಯಲಿ, ಟೊಂಗೆಯಲಿ, ಬಾನಿನಲಿ)

೩. ಲತ್ತೆಯ ಪೆಟ್ಟಿಗೆ __________ ಗಕ್ಕನೆ ಟೊಂಗೆಯ ಸೇರಿತು ಮತ್ತೆ
(ಇಲಿಮರಿ, ಅಳಿಲುಮರಿ, ಕತ್ತೆಮರಿ, ನಾಯಿಮರಿ)

೪. ಸತ್ತೆ ಎನ್ನುತ ________ ಕಾಲಿಗೆ ಬುದ್ಧಿ ಹೇಳಿತು
(ಅಳಿಲು, ಕತ್ತೆ, ನರಿ, ಹುಲಿ)

೫. ರಾಷ್ಟ್ರಪ್ರಶಸ್ತಿ ಪಡೆದಿರುವ 'ಸಿಸು' ಸಂಗಮೇಶರ ಕೃತಿ __________
(ನನ್ನ ಮನೆ, ನನ್ನ ಶಾಲೆ, ಕಾಡಿನ ಕಲಿಗಳು, ದಾರಿಯ ಬುತ್ತಿ)

**ಆ. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ:**

ಹುಲ್ಲಿನಮೆತ್ತೆ, ಗಾಬರಿ, ಗಕ್ಕನೆ, ಅಂಜು, ಮತ್ತೆ, ಇಲಿಮರಿ

**ಇ. ವಿರುದ್ಧಾರ್ಥಕ ಪದ ಬರೆಯಿರಿ:**

ಕೆಳಗೆ, ತುದಿ, ಜಾಣರು

**ಈ. ಸಮಾನಾರ್ಥಕ ಪದಗಳನ್ನು ಬರೆಯಿರಿ:**

ಕಾಡು, ಕಾದು, ಹಿಡಿ, ಗಾಬರಿ, ಅಂಜು, ಮತ್ತೆ

**ಉ. ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ಊರಿನ ಕತ್ತೆ ಕಾಡಿಗೆ ಹೋಗಲು ಕಾರಣವೇನು?

೨. ಟೊಂಗೆಯ ತುದಿಯಲ್ಲಿ ಯಾರು ಯಾರು ಕಾದುತ್ತಿದ್ದರು?

೩. ಇಲಿಮರಿಯು ಏಕೆ ಟೊಂಗೆಯ ತುದಿಯನ್ನು ಸೇರಿತು?

೪. ಕತ್ತೆ ಯಾವಾಗ ಅಂಜಿತು?

೫. ಜಾಣರು ಯಾರು? ಪದ್ಯ ರಚಿಸಿರುವ ಕವಿ ಯಾರು?

**ಊ. ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಕತ್ತೆಗೆ ಯಾವಾಗ ಹುಲ್ಲಿನ ಮೆತ್ತೆ ಕಂಡಿತು?

೨. ಕತ್ತೆಗೆ ಗಾಬರಿಯಾಗಲು ಕಾರಣವೇನು?

೩. ಇಲಿಮರಿ ಕತ್ತೆಯನ್ನು ಹೇಗೆ ಅಂಜಿಸಿತು?

೪. ಕತ್ತೆ, ಅಳಿಲು, ಇಲಿಮರಿ ಈ ಮೂವರಲ್ಲಿ ಯಾರು ಜಾಣರು? ಏಕೆ?

## – ಭಾಷಾಭ್ಯಾಸ –

**ಅ.** ೧. ಜಾಣರು ಯಾರು ಪದ್ಯದ ಮೊದಲ ಎಂಟು ಸಾಲುಗಳನ್ನು ಕಂಠಪಾಠ ಮಾಡಿ.

೨. ಜಾಣರು ಯಾರು ಪದ್ಯದ ಪ್ರಸಂಗವನ್ನು ಕಥೆಯ ರೂಪದಲ್ಲಿ ಬರೆಯಿರಿ

೩. ಕತ್ತೆ, ಅಳಿಲು, ಇಲಿ ಪಾತ್ರಗಳನ್ನು ಮಾಡಿ ಸಂಭಾಷಣೆಯ ಮಾದರಿಯಲ್ಲಿ ಅವುಗಳ ಮಾತುಗಳನ್ನು ಬರೆಯಿರಿ.

**ಆ. ಬಹುವಚನ ರೂಪ ಬರೆಯಿರಿ:**

ಕತ್ತೆ, ಮನೆ, ಟೊಂಗೆ, ಇಲಿ

**ಇ. ಕೊಟ್ಟಿರುವ ಶಬ್ದಗಳ ಶುದ್ಧ ರೂಪ ಬರೆಯಿರಿ:**

ಹಲಿನ ಮೆತೆ, ಕಲಿನಲತೆ, ಬಿದಿತುಕತೆ, ಕಲಿಗೆಬುದಿ, ಜಣರ

**ಈ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಕನ್ನಡ ವರ್ಣಮಾಲೆಯಲ್ಲಿರುವ ಒಟ್ಟು ಅಕ್ಷರಗಳು ಎಷ್ಟು?

೨. ವರ್ಗೀಯ ವ್ಯಂಜನ ಎಂದರೇನು? ಉದಾಹರಣೆ ಕೊಡಿ.

೩. ಕನ್ನಡದ ಅನುನಾಸಿಕ ಅಕ್ಷರಗಳು ಯಾವುವು?

೪. ಅವರ್ಗೀಯ ವ್ಯಂಜನ ಎಂದರೇನು? ಉದಾಹರಣೆ ಕೊಡಿ.

**ಉ. ಕೊಟ್ಟಿರುವ ಪದಗಳ ರಚನೆಯನ್ನು ಗಮನಿಸಿರಿ:**

ಮಾಡಿಸು > ಮಾಡು + ಇಸು

ಕೇಳಿಸು > ಕೇಳು + ಇಸು

ತಿನ್ನಿಸು > ತಿನ್ನು + ಇಸು

ಕರೆಸು > ಕರೆ + ಇಸು

ಕುಡಿಸು > ಕುಡಿ + ಇಸು

**– ಚಟುವಟಿಕೆ –**

**ಅ. ಈ ಮಾತುಗಳನ್ನು ನಾಲ್ಕು ವಾಕ್ಯಗಳಲ್ಲಿ ವಿಸ್ತರಿಸಿ ಬರೆಯಿರಿ:**

- ಅಧಿಕಾರಿಯ ಮುಂದಿರಬೇಡ, ಕತ್ತೆಯ ಹಿಂದಿರಬೇಡ.
- ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು.

**ಆ. ಸುಳಿವು ಪದಗಳನ್ನು ಬಳಸಿಕೊಂಡು ಕವಿತೆಯನ್ನು ಪೂರ್ಣಗೊಳಿಸಿರಿ:**

ಮಲಗಿದಂಥ ಹುಲಿಯ ಮೇಲೆ

ಮರದ ಹಣ್ಣು __________

ನಿದ್ದೆಯಿಂದ ಎದ್ದ ಹುಲಿಯು

ಮಂಗನ __________

ಹುಲಿಯ ಕೈಗೆ ಸಿಗದ ಹಾಗೆ

ಕೊಂಬೆ ಮೇಲೆ ________

ಮಂಗನನ್ನು ಹಿಡಿಯಲೆಂದು

ಹುಲಿಯು ಕೂಡ _________

ಹುಲಿಯ ಭಾರ ತಾಳಲಿಲ್ಲ

ಕೊಂಬೆ ಮುರಿದು ______

ಹೊಂಡದಲ್ಲಿ ಹುಲಿಯ ಕೆಡವಿ

ಮಂಗ ತಾನೆ ________

(ಬಿದ್ದಿತು, ನೋಡಿತು, ನಕ್ಕಿತು, ನೆಗೆಯಿತು, ಜಿಗಿಯಿತು, ಹೋಯಿತು)

## ಇ. ಗದ್ಯಭಾಗವನ್ನು ಓದಿಕೊಂಡು ಪ್ರಶ್ನೆಗಳಿಗೆ ಉತ್ತರಿಸಿ:

ಒಂದು ಭಾಷೆ ಸತ್ವಪೂರ್ಣವಾಗಬೇಕಾದರೆ ಅದನ್ನಾಡುವ ಜನ ಅಭಿಮಾನಧನರೂ, ಬುದ್ಧಿಶಾಲಿಗಳೂ, ಪ್ರಯೋಗಶೀಲರೂ ಆಗಿರಬೇಕು. ನಾಲ್ಕೈದು ಶತಮಾನಗಳ ಹಿಂದೆ ಆಂಗ್ಲ ಭಾಷೆ ಯುರೋಪಿನ ಸಾಮಾನ್ಯ ಭಾಷೆಗಳಲ್ಲಿ ಒಂದಾಗಿತ್ತು. ಆಂಗ್ಲ ಜನತೆ ಸಾಹಸ ಜೀವಿಯಾಯಿತು. ಬುದ್ಧಿಶಾಲಿಯಾಯಿತು. ಸೂರ್ಯನು ಎಂದೂ ಮುಳುಗನೆನ್ನುವಂತಹ ವಿಸ್ತಾರವಾದ ಸಾಮ್ರಾಜ್ಯವನ್ನು ಸ್ಥಾಪಿಸಿತು. ದೇಶ–ವಿದೇಶಗಳ ಭಾಷೆ ಹಾಗೂ ಸಾಹಿತ್ಯ ಸಂಸ್ಕೃತಿಯನ್ನು ಆಂಗ್ಲ ಪಂಡಿತರು ಮುಕ್ತ ಮನಸ್ಸಿನಿಂದ ಅಭ್ಯಸಿಸಿದರು. ತನ್ಮೂಲಕ ತಮ್ಮ ಭಾಷೆ ಮತ್ತು ಸಾಹಿತ್ಯವನ್ನು ಹಿಗ್ಗಿಸಿದರು, ಅರಳಿಸಿದರು. ಆಂಗ್ಲ ವಿಜ್ಞಾನಿಗಳೂ, ರಾಜಕಾರಣಿಗಳು, ಅರ್ಥಶಾಸ್ತ್ರಜ್ಞರು ಹೀಗೆ ಎಲ್ಲರೂ ತಮ್ಮ ಭಾಷೆಯನ್ನೇ ಬಳಸಿದುದರ ಪರಿಣಾಮವಾಗಿ ಆ ಭಾಷೆ ಬೆಳೆದು ಇಂದು ಪ್ರಪಂಚದ ದೊಡ್ಡ ಭಾಷೆಗಳಲ್ಲಿ ಒಂದಾಗಿದೆ.

– **ಎಂ. ಮರಿಯಪ್ಪಭಟ್ಟ**

೧. ಒಂದು ಭಾಷೆ ಯಾವಾಗ ಸತ್ವಪೂರ್ಣವಾಗುತ್ತದೆ?

೨. ಆಂಗ್ಲ ಪಂಡಿತರು ಮುಕ್ತ ಮನಸ್ಸಿನಿಂದ ಏನನ್ನು ಅಭ್ಯಸಿಸಿದರು?

೩. ಯುರೋಪಿನ ಸಾಮಾನ್ಯ ಭಾಷೆಗಳಲ್ಲಿ ಒಂದಾಗಿದ್ದ ಭಾಷೆ ಯಾವುದು?

೪. ಆಂಗ್ಲಭಾಷೆ ಪ್ರಪಂಚದ ದೊಡ್ಡ ಭಾಷೆಗಳಲ್ಲಿ ಒಂದಾದದ್ದು ಹೇಗೆ?

☆☆☆☆☆

# ೪. ಸೋಲಿಗರ ಆಶಾಕಿರಣ ಡಾ॥ ಸುದರ್ಶನ್ (ಗದ್ಯ)



ಡಾ॥ ಸುದರ್ಶನ್ ೧೯೫೦ನೇ ಡಿಸೆಂಬರ್ ೩೦ರಂದು ಬೆಂಗಳೂರು ನಗರಜಿಲ್ಲೆಯ ಯಮಲೂರು ಗ್ರಾಮದಲ್ಲಿ ಹನುಮಪ್ಪ ರೆಡ್ಡಿ, ಚಿನ್ನಮ್ಮ ದಂಪತಿಗಳಿಗೆ ನಾಲ್ಕನೆಯ ಮಗನಾಗಿ ಜನಿಸಿದರು.

ಇವರ ಪ್ರಾಥಮಿಕ ಶಿಕ್ಷಣ ಬೆಂಗಳೂರಿನ ರಾಣಿ ಸರಳಾದೇವಿ ಶಾಲೆಯಲ್ಲಿ, ಪ್ರೌಢ ಶಿಕ್ಷಣ ರಾಷ್ಟ್ರೀಯ ವಿದ್ಯಾಲಯದಲ್ಲಿ ಹಾಗೂ ಪಿ.ಯು.ಸಿ. ಶಿಕ್ಷಣವು ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಆಯಿತು.

ತಂದೆ ತಾಯಿಗಳ ಅಪೇಕ್ಷೆಯಂತೆ ವೈದ್ಯಕೀಯ ಶಿಕ್ಷಣವನ್ನು ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ ಮುಗಿಸಿ, ತಮ್ಮ ವೃತ್ತಿ ಜೀವನವನ್ನು ವಿವಿಧ ಸಮಾಜಸೇವಾ ಸಂಸ್ಥೆಗಳು ನಡೆಸುವ ಆಸ್ಪತ್ರೆಗಳಲ್ಲಿ ಆರಂಭಿಸಿದರು. ರಾಮಕೃಷ್ಣ ಮಿಷನ್ ಆಸ್ಪತ್ರೆ – ಉತ್ತರ ಪ್ರದೇಶ, ಕೊಲ್ಕೊತ್ತ ಬೇಲೂರು ಮಠ ಮತ್ತು ಪೊನ್ನಂಪೇಟೆಗಳಲ್ಲಿ ವೈದ್ಯವೃತ್ತಿಯ ಸೇವೆಯನ್ನು ಸಲ್ಲಿಸಿದ್ದಾರೆ.





ಬಾಲ್ಯದಿಂದಲೇ ವಿವೇಕಾನಂದರ ಜೀವನ ಆದರ್ಶಗಳನ್ನು ಅನುಸರಿಸುತ್ತಾ ಬಂದ ಇವರು ಬಿಳಿಗಿರಿ ರಂಗನ ಬೆಟ್ಟದಲ್ಲಿ ನೆಲೆಸಿರುವ ಸೋಲಿಗ ಜನಾಂಗವನ್ನು ತುಂಬಾ ಹತ್ತಿರದಿಂದ ನೋಡಬಯಸಿದರು. 'ಸೋಲಿಗ' ಜನಾಂಗದ ರೀತಿ, ನೀತಿ, ಜೀವನ ಶೈಲಿ ಇವುಗಳನ್ನು ಅಭ್ಯಸಿಸಿ, ಅವರ ದಿನನಿತ್ಯದ ಬದುಕಿಗೆ ತೊಂದರೆಯಾಗದಂತೆ ಅವರೊಡನೆಯೇ ಇದ್ದು, ಈ ಸಮುದಾಯದ ಸರ್ವತೋಮುಖ ಅಭಿವೃದ್ಧಿಯ ಯೋಜನೆಯನ್ನು ಮನದಾಳದಲ್ಲಿಟ್ಟುಕೊಂಡು ೧೯೮೧ರಲ್ಲಿ 'ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ'ವನ್ನು ಸ್ಥಾಪಿಸಿದರು. ಈ ಸಂಸ್ಥೆ ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲಾಗಿರುವ ಒಂದು ಉತ್ತಮ ಸಂಸ್ಥೆಯಾಗಿ ಬೆಳೆದು ಹೆಮ್ಮರವಾಗಿದೆ.

ಈ ಕೇಂದ್ರದ ಮುಖೇನ 'ಗಿರಿಜನರ' ಸರ್ವಾಂಗೀಣ ಬೆಳವಣಿಗೆಗೆ ಹಗಲಿರುಳು ಶ್ರಮಿಸುತ್ತಿದ್ದಾರೆ. ಇವರ ನಿರಂತರ ಸೇವೆಯ ಫಲವಾಗಿ ಬಿಳಿಗಿರಿರಂಗನ ಬೆಟ್ಟದಲ್ಲಿ 'ಗಿರಿಜನ' ಮಕ್ಕಳ ಅಭಿವೃದ್ಧಿಗಾಗಿ ಪ್ರಾಥಮಿಕ, ಪ್ರೌಢ ಹಾಗೂ ಕಾಲೇಜು ಶಿಕ್ಷಣ ಸಂಸ್ಥೆಗಳು ಸ್ಥಾಪಿತವಾಗಿವೆ.

"ಜನರಿಗೆ ಸ್ವಾವಲಂಬನೆಯನ್ನು ಕಲಿಸದಿದ್ದರೆ ಪ್ರಪಂಚದ ಸಮಸ್ತ ನಿಧಿಯೂ ಭಾರತದ ಒಂದು ಸಣ್ಣ ಹಳ್ಳಿಗೂ ಸಹಾಯ ಮಾಡಲಾರದು" ಎಂದು ಹೇಳಿದ ಸ್ವಾಮಿ ವಿವೇಕಾನಂದರ ಮಾತಿನ ಹಿನ್ನೆಲೆಯಲ್ಲಿ ಗ್ರಾಮೀಣ ಜನರ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗುವಂತೆ ೧೯೮೬ರಲ್ಲಿ 'ಕರುಣಾ ಟ್ರಸ್ಟ್' ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ಗೌರವ ಕಾರ್ಯದರ್ಶಿಯಾಗಿ, ಸದಾ ಕ್ರಿಯಾಶೀಲರಾಗಿ, ರಾಜ್ಯ ಸರ್ಕಾರದ ಸಹಯೋಗದೊಂದಿಗೆ ಸಾರ್ವಜನಿಕ–ಖಾಸಗಿ ಸಹಭಾಗಿತ್ವದಡಿ ದೇಶದ ಐದು ಪ್ರದೇಶಗಳಲ್ಲಿ – ಕರ್ನಾಟಕ, ನಾಗಾಲ್ಯಾಂಡ್, ಅರುಣಾಚಲ ಪ್ರದೇಶ, ಆಂಧ್ರ, ಅಂಡಮಾನ್ ನಿಕೋಬಾರ್ ಮತ್ತು ತಮಿಳುನಾಡು – ಹಿಂದುಳಿದ ಪ್ರದೇಶಗಳಲ್ಲಿ ೪೫ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ದತ್ತು ತೆಗೆದುಕೊಂಡು ಗ್ರಾಮೀಣ ಪ್ರದೇಶದ ಜನರಿಗೆ ಆರೋಗ್ಯ ಸೇವೆ, ಆರೋಗ್ಯ ವಿಮೆ, ಮಾನಸಿಕ ಆರೋಗ್ಯ, ಟೆಲಿ ಮೆಡಿಸಿನ್ ಮುಂತಾದ ಸೇವೆಗಳನ್ನು ನೀಡುತ್ತಾ ಬಂದಿದ್ದಾರೆ.

ಸಮಾಜದ ಒಳಿತಿಗಾಗಿ ತಮ್ಮನ್ನು ಪೂರ್ಣವಾಗಿ ಸಮರ್ಪಿಸಿಕೊಂಡ ಡಾ॥ ಸುದರ್ಶನ್ ಈ ಶತಮಾನ ಕಂಡ ಮಾದರಿ ವೈದ್ಯ. ಇವರು ಕರ್ನಾಟಕ ಲೋಕಾಯುಕ್ತ ಜಾಗೃತ ದಳದ ಸದಸ್ಯರಾಗಿ ಸೇವೆ ಸಲ್ಲಿಸುವ ಮುಖೇನ ಭ್ರಷ್ಟಾಚಾರದ ವಿರುದ್ಧ ಹೋರಾಡಿದ್ದಾರೆ.

ರಾಜ್ಯ ಪರಿಶಿಷ್ಟ ಜಾತಿ ಪಂಗಡದ ಯೋಜನಾ ಸಮಿತಿ ಸದಸ್ಯರಾಗಿ, ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯಪಡೆ ಅಧ್ಯಕ್ಷರಾಗಿ ಪ್ರಾಥಮಿಕ ಶಿಕ್ಷಣ ಇಲಾಖೆಯ ಕಾರ್ಯಪಡೆ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಅಲ್ಲದೆ ಇವರು ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳನ್ನು ಅಲಂಕರಿಸಿ ಉತ್ತಮ ಸೇವೆ ಸಲ್ಲಿಸುತ್ತಿರುವುದು ಗಮನಾರ್ಹ.

ಪ್ರಸ್ತುತ ಇವರು ನ್ಯಾಷನಲ್ ನ್ಯೂಟ್ರಿಷನ್ ಮಿಷನ್ ಸದಸ್ಯರಾಗಿ, ರಾಜ್ಯ ಸರ್ಕಾರದ ವಿಷನ್ ೨೦೨೦ರ ಸದಸ್ಯರಾಗಿ ಐ.ಹೆಚ್.ಎಂ.ಆರ್.ನ ಅಧ್ಯಕ್ಷರಾಗಿ, ಕೇಂದ್ರ ಸರ್ಕಾರದ ಗ್ರಾಮೀಣ ಆರೋಗ್ಯ ಅಭಿಯಾನದ ವಿ.ಐ.ಪಿ. ಅಧ್ಯಕ್ಷರಾಗಿರುತ್ತಾರೆ.

ಇವರ ಸಮಾಜ ಸೇವೆಯನ್ನು ಗುರುತಿಸಿ ಅನೇಕ ರಾಷ್ಟ್ರೀಯ, ಅಂತಾರಾಷ್ಟ್ರೀಯ ಪ್ರಶಸ್ತಿಗಳು ದೊರೆತಿವೆ. ಪದ್ಮಶ್ರೀ ಪ್ರಶಸ್ತಿ, ವಿವೇಕಾನಂದ ಸೇವಾ ಪುರಸ್ಕಾರ, ರಾಜ್ಯೋತ್ಸವ ಪ್ರಶಸ್ತಿ ಅವರನ್ನು ಅರಸಿ ಬಂದಿವೆ. ಪ್ರತಿಷ್ಠಿತ ಅಂತಾರಾಷ್ಟ್ರೀಯ ಪರ್ಯಾಯ ನೊಬೆಲ್ ಬಹುಮಾನವೆನಿಸಿದ 'ರೈಟ್ ಲೈವ್ಲಿಹುಡ್' ಪ್ರಶಸ್ತಿಯನ್ನು ೧೯೯೪ರಲ್ಲಿ ಪಡೆದು ಪ್ರಶಸ್ತಿಯ ಹಣವನ್ನು 'ಸೋಲಿಗ' ಸಮುದಾಯದ ಅಭಿವೃದ್ಧಿಗೆ ಮುಡುಪಾಗಿಟ್ಟಿದ್ದಾರೆ. ಈ ಬಹುಮಾನ ಪಡೆದ ಸಂದರ್ಭದಲ್ಲಿ ಅವರ ಗೆಳೆಯರೊಬ್ಬರು ಈ ಬಹುಮಾನದಿಂದ ನಿಮಗೆ ಸಂತಸವಾಗಿದೆಯೇ ಎಂದು ಕೇಳಿದಾಗ ಅವರು "ಇದು ಸೋಲಿಗ ಸಮುದಾಯಕ್ಕೆ, ಇಡೀ ಮನುಕುಲಕ್ಕೆ ಸಂದ ಸಂತಸ" ಎಂದರಂತೆ. ಇಷ್ಟೆಲ್ಲಾ ಕೀರ್ತಿಯಿದ್ದರೂ ಡಾ॥ ಸುದರ್ಶನ್ ಜನಸಾಮಾನ್ಯರಂತೆ ಸದಾ ತಮ್ಮನ್ನು ಜನಪರ ಸೇವೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಅಪರೂಪದ ವ್ಯಕ್ತಿಗಳು. ೨೦೧೧ರಲ್ಲಿ ರೌಂಡ್ ಟೇಬಲ್ ಇಂಡಿಯಾ ಸಂಸ್ಥೆಯವರು ಅವರಿಗೆ 'ಪ್ರೈಡ್ ಆಫ್ ಕರ್ನಾಟಕ' ಪ್ರಶಸ್ತಿ ನೀಡಿದ್ದಾರೆ.

**– ಸಂಪಾದಿತ ಕೃತಿ**

## – ಓದಿ ತಿಳಿಯಿರಿ –

ಸರಳ – ಆಡಂಬರವಿಲ್ಲದ

ಹೆಮ್ಮರ – ದೊಡ್ಡ ಮರ

ಮುಡುಪು – ಮೀಸಲು

ಅಮೂಲ್ಯ – ಬೆಲೆಕಟ್ಟಲಾಗದ

ಅಪರೂಪ – ಅಪೂರ್ವವಾದ

ಮನದಾಳ – ಅಂತರಂಗ, ಮನಸ್ಸು

ಪ್ರಶಸ್ತಿ – ಪುರಸ್ಕಾರ

ಪರ್ಯಾಯ – ಬದಲಿ

ಸಹಯೋಗ – ಸಹಕಾರ, ಒಟ್ಟಾಗಿ ಕೆಲಸ ಮಾಡುವುದು

## – ಗಮನಿಸಿರಿ –

ಹಗಲಿರುಳು – ನಿರಂತರ

ಅಂತಾರಾಷ್ಟ್ರೀಯ – ವಿಶ್ವಮಟ್ಟದ

ಲೋಕಾಯುಕ್ತ – ರಾಜ್ಯದಲ್ಲಿ ಭ್ರಷ್ಟಾಚಾರ ತಡೆಗಟ್ಟಲು ನೇಮಕಗೊಂಡಿರುವ ಸಾಂವಿಧಾನಿಕ ಸಂಸ್ಥೆ

ಭ್ರಷ್ಟಾಚಾರ – ನೀತಿ ನಿಯಮಗಳ ವಿರುದ್ಧವಾದ ಆಚರಣೆ

ಸ್ವಾವಲಂಬನೆ – ಸ್ವತಂತ್ರವಾಗಿರುವುದು



## – ಅಭ್ಯಾಸ –

**ಅ. ಹೊಂದಿಸಿ ಬರೆಯಿರಿ:**

| 'ಅ' ಪಟ್ಟಿ | 'ಬಿ' ಪಟ್ಟಿ |
|---|---|
| ೧. ಹನುಮಪ್ಪ ರೆಡ್ಡಿ | (ಅ) ಕೇಂದ್ರ ಸರ್ಕಾರದ ಪ್ರಶಸ್ತಿ |
| ೨. ಬಿಳಿಗಿರಿರಂಗನ ಬೆಟ್ಟ | (ಆ) ಬೆಲೆ ಕಟ್ಟಲಾಗದ |
| ೩. ಮಾದರಿ ವೈದ್ಯ | (ಇ) ಚಿನ್ನಮ್ಮ |
| ೪. ಪದ್ಮಶ್ರೀ | (ಈ) ರಾಜ್ಯ ಸರ್ಕಾರ |
| ೫. ಅಮೂಲ್ಯ | (ಉ) ಸೋಲಿಗರು |
| | (ಊ) ಡಾ॥ ಸುದರ್ಶನ್ |

## ಆ. ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ:

೧. ಡಾ॥ ಸುದರ್ಶನ್ ಅವರು ___________ ರಂದು ಜನಿಸಿದರು.

೨. ೧೯೮೧ರಲ್ಲಿ ಸ್ಥಾಪನೆಯಾದ ಸಂಸ್ಥೆ ___________

೩. ಕರುಣಾ ಟ್ರಸ್ಟ್ ___________ರಲ್ಲಿ ಆರಂಭವಾಯಿತು

೪. ಡಾ॥ ಸುದರ್ಶನ್ ಅವರು ___________ ವಿರುದ್ಧ ಹೋರಾಡಿದರು.

## ಇ. ಗುಂಪಿಗೆ ಸೇರದ ಪದವನ್ನು ಆರಿಸಿ ಬರೆಯಿರಿ:

೧. ಪದ್ಮಶ್ರೀ ಪ್ರಶಸ್ತಿ, ಜ್ಯೋತಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಪರಿಸರ ಪ್ರಶಸ್ತಿ

೨. ಉತ್ತರ ಪ್ರದೇಶ, ಬೇಲೂರು ಮಠ, ಪೊನ್ನಂಪೇಟೆ, ಮೈಸೂರು

೩. ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ವಿವೇಕಾನಂದ ಶಿಕ್ಷಣ ಸಂಸ್ಥೆ, ಕರುಣಾ ಟ್ರಸ್ಟ್, ಸಾಮಾನ್ಯ ಶಿಕ್ಷಣ ಕೇಂದ್ರ

೪. ಡಾ॥ ಸುದರ್ಶನ್, ಚಿನ್ನಮ್ಮ, ಹನುಮಪ್ಪರೆಡ್ಡಿ, ಸೋಲಿಗ

## ಈ. ಈ ವಾಕ್ಯಗಳು ಸರಿಯಿದ್ದರೆ ಸರಿಯೆಂದೂ, ತಪ್ಪಿದ್ದರೆ ತಪ್ಪೆಂದೂ ಗುರುತಿಸಿ: ಕಾರಣ ಹೇಳಿರಿ:

೧. ಡಾ॥ ಸುದರ್ಶನ್ ಅವರು ಬಳ್ಳಾರಿಯ ಮೆಡಿಕಲ್ ಕಾಲೇಜಿನಲ್ಲಿ ವೈದ್ಯಕೀಯ ಶಿಕ್ಷಣ ಪಡೆದರು. ಸರಿ / ತಪ್ಪು

೨. ಡಾ॥ ಸುದರ್ಶನ್‌ರವರು ವಿವೇಕಾನಂದರ ಜೀವನ ಆದರ್ಶಗಳನ್ನು ಅನುಸರಿಸುತ್ತಾ ಬಂದರು ಸರಿ / ತಪ್ಪು

೩. ೧೯೮೬ನೇ ಇಸವಿಯಲ್ಲಿ ವಿವೇಕಾನಂದರ ಗಿರಿಜನ ಕಲ್ಯಾಣ ಕೇಂದ್ರ ಸ್ಥಾಪನೆಯಾಯಿತು. ಸರಿ / ತಪ್ಪು

೪. ಡಾ॥ ಸುದರ್ಶನ್ ಅವರಿಗೆ ರೈಟ್ ಲೈವ್ಲಿಹುಡ್ ಪ್ರಶಸ್ತಿ ದೊರೆಯಿತು. ಸರಿ / ತಪ್ಪು

## ಉ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ:

೧. ಡಾ॥ ಸುದರ್ಶನ್‌ರವರು ಎಲ್ಲಿ ಜನಿಸಿದರು?

೨. ಡಾ॥ ಸುದರ್ಶನ್ ಅವರ ತಂದೆ ತಾಯಿಯರ ಹೆಸರೇನು?

೩. ಡಾ॥ ಸುದರ್ಶನ್ ಅವರು ಬಾಲ್ಯದಿಂದಲೂ ಯಾರ ಆದರ್ಶವನ್ನು ಅನುಸರಿಸುತ್ತಾ ಬಂದರು?

೪. ಬಿಳಿಗಿರಿರಂಗನ ಬೆಟ್ಟದಲ್ಲಿ ನೆಲೆಸಿರುವ ಜನಾಂಗ ಯಾವುದು?

**ಊ. ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. ಡಾ॥ ಸುದರ್ಶನ್‌ರವರ ವಿದ್ಯಾಭ್ಯಾಸ ಎಲ್ಲಿ ನಡೆಯಿತು?

೨. ಡಾ॥ ಸುದರ್ಶನ್ ಅವರ ವೈದ್ಯಕೀಯ ವೃತ್ತಿಯ ವಿಶೇಷತೆ ಏನು?

೩. 'ಸೋಲಿಗ' ಜನಾಂಗದ ಜೊತೆ ಡಾ॥ ಸುದರ್ಶನ್ ಹೇಗೆ ಹೊಂದಿಕೊಂಡಿದ್ದರು?

೪. ಡಾ॥ ಸುದರ್ಶನ್ ಅವರು ಗ್ರಾಮೀಣ ಜನರಿಗೆ ಯಾವ ರೀತಿಯ ಸೇವೆಗಳನ್ನು ಮಾಡುತ್ತಾ ಬಂದಿದ್ದಾರೆ?

೫. ಡಾ॥ ಸುದರ್ಶನ್ ಅವರಿಗೆ ದೊರೆತಿರುವ ಪ್ರಶಸ್ತಿಗಳು ಯಾವುವು?

೬. ಸ್ವಾವಲಂಬನೆ ಬಗ್ಗೆ ವಿವೇಕಾನಂದರು ಹೇಳಿರುವ ಮಾತುಗಳೇನು?

**ಋ. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ:**

ಆದರ್ಶ, ನಿರಂತರ, ಸ್ವಾವಲಂಬನೆ, ಭ್ರಷ್ಟಾಚಾರ



## – ಭಾಷಾಭ್ಯಾಸ –

**ಅ. ಈ ಪದಗಳನ್ನು ಬಿಡಿಸಿ ಬರೆಯಿರಿ:**

೧. ವಿದ್ಯಾಭ್ಯಾಸ =

೨. ಶಿಕ್ಷಣವನ್ನು =

೩. ಮನದಾಳ =

೪. ಹಗಲಿರುಳು =

**ಆ. ಈ ಪದಗಳನ್ನು ಮಾದರಿಯಂತೆ ಕೂಡಿಸಿ ಬರೆಯಿರಿ:**

***ಮಾದರಿ : ಊರು + ಒಂದು = ಊರೊಂದು***

೧. ಕೇಂದ್ರ + ಅನ್ನು =

೨. ಸಂಸ್ಥೆ + ಆಗಿ =

೩. ಗಮನ + ಅರ್ಹ =

೪. ಶಾಲೆ + ಅಲ್ಲಿ =

೫. ಸೇವೆ + ಅಲ್ಲಿ =

## – ಚಟುವಟಿಕೆ –

**ಅ. ಈ ಚೌಕದಲ್ಲಿರುವ ಅಕ್ಷರಗಳನ್ನು ಆರಿಸಿ ಪದಗಳನ್ನು ರಚಿಸಿ:**

| | | | | | | | |
|---|---|---|---|---|---|---|---|
| ಸ | ರ | ಅ | ಕ | ಗ | ನ | ಆ | ಮ |

*ಮಾದರಿ : ಸರಸ*

## – ಗುಣಿತಾಕ್ಷರಗಳು –

ಯಾವುದೇ ವ್ಯಂಜನಕ್ಕೆ ಸ್ವರ ಸೇರಿದಾಗ ಗುಣಿತಾಕ್ಷರವಾಗುತ್ತವೆ.

ಉದಾ: ಮ್ + ಅ = ಮ; ಬ್ + ಆ = ಬಾ

ಸ್+ಓ ಲ್+ಇ ಗ್+ಅ = ಸೋಲಿಗ

ಸ್+ಏ ವ್+ಆ = ಸೇವಾ

**ಸಂಯುಕ್ತಾಕ್ಷರಗಳು (ಒತ್ತಕ್ಷರಗಳು)**

ಎರಡು ಅಥವಾ ಎರಡಕ್ಕಿಂತ ಹೆಚ್ಚು ವ್ಯಂಜನಗಳಿಗೆ ಒಂದು ಸ್ವರ ಸೇರಿ ಆಗುವ ಅಕ್ಷರವೇ ಸಂಯುಕ್ತಾಕ್ಷರ ಈ ಸಂಯುಕ್ತಾಕ್ಷರಗಳಲ್ಲಿ ಎರಡು ವಿಧ : ಸಜಾತೀಯ ಸಂಯುಕ್ತಾಕ್ಷರ ಮತ್ತು ವಿಜಾತೀಯ ಸಂಯುಕ್ತಾಕ್ಷರ.

೧. **ಸಜಾತೀಯ ಸಂಯುಕ್ತಾಕ್ಷರ** – ಉದಾ: ಅ + ಮ್ + ಮ್ + ಅ = ಅಮ್ಮ
ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು

೨. **ವಿಜಾತೀಯ ಸಂಯುಕ್ತಾಕ್ಷರ** – ಉದಾ: ಸ್+ಊ ರ್+ಯ್+ಅ = ಸೂರ್ಯ
ರಾಜ್ಯ, ಮಿತ್ರ, ವ್ಯಕ್ತಿ, ರೇಶ್ಮೆ, ಭಕ್ತ

ಮಾದರಿ – ೧ – ತಂದೆಗೆ ಪತ್ರ

## – ಪತ್ರಲೇಖನ –

ಕ್ಷೇಮ                ಶ್ರೀ                ದಿನಾಂಕ: ೧೮.೦೨.೨೦೧೧

**ಸಹನ**
ಎಂಟನೆಯ ತರಗತಿ
ಸರ್ಕಾರಿ ಪ್ರೌಢಶಾಲೆ
ಭುವನೇಶ್ವರಿ ನಗರ
ಬೆಂಗಳೂರು

ತೀರ್ಥರೂಪರವರಿಗೆ, ಸಹನ ಮಾಡುವ ನಮಸ್ಕಾರಗಳು. ನಾನು ಇಲ್ಲಿ ಆರೋಗ್ಯವಾಗಿದ್ದೇನೆ. ನೀವು ಆರೋಗ್ಯವಾಗಿದ್ದೀರೆಂದು ಭಾವಿಸುತ್ತೇನೆ.

ಈಗ ತಮಗೆ ಪತ್ರ ಬರೆಯಲು ಕಾರಣವೇನೆಂದರೆ ನಮ್ಮ ಶಾಲೆಯಲ್ಲಿ ಈ ತಿಂಗಳ ಕೊನೆಯ ವಾರದಲ್ಲಿ ಶಾಲಾ ವಾರ್ಷಿಕೋತ್ಸವ ನಡೆಯಲಿದೆ. ನಾನು ಮತ್ತು ನನ್ನ ಗೆಳತಿಯರು ವಾರ್ಷಿಕೋತ್ಸವದ ಅಂಗವಾಗಿ ನಡೆಯುವ ಜನಪದ ನೃತ್ಯದಲ್ಲಿ ಭಾಗವಹಿಸುತ್ತಿದ್ದೇವೆ. ನೀವು ಮತ್ತು ಅಮ್ಮ ದಯಮಾಡಿ ನಮ್ಮ ವಾರ್ಷಿಕೋತ್ಸವಕ್ಕೆ ಬರಬೇಕೆಂದು ಈ ಮೂಲಕ ತಮ್ಮಲ್ಲಿ ಬೇಡಿಕೊಳ್ಳುತ್ತೇನೆ. ಅಣ್ಣನಿಗೆ ನನ್ನ ನಮಸ್ಕಾರಗಳನ್ನು ತಿಳಿಸಿ. ಹೆಚ್ಚಿನ ವಿಷಯಕ್ಕೆ ಮತ್ತೆ ಪತ್ರ ಬರೆಯುತ್ತೇನೆ.

ನಮಸ್ಕಾರಗಳು,

ನಿಮ್ಮ ಪ್ರೀತಿಯ ಮಗಳು
**ಸಹನ**

ಗೆ

.........................................
.......................................
..........................................

ಅ. ನಿಮ್ಮ ವಿದ್ಯಾಭ್ಯಾಸದ ಪ್ರಗತಿಯನ್ನು ತಿಳಿಸಿ ತಂದೆ / ತಾಯಿಗೆ ಪತ್ರ ಬರೆಯಿರಿ

ದಿನಾಂಕ ______________

ಹೆಸರು, ವಿಳಾಸ

______________

______________

______________

______________

ತೀರ್ಥರೂಪ..........................................ನಮಸ್ಕಾರಗಳು ................................................

................................................................................

..............................................................................................................................

..............................................................................................................................

..............................................................................................................................

..............................................................................................................................

..............................................................................................................................

..........................................................................

ನಮಸ್ಕಾರಗಳು,

ನಿಮ್ಮ ಪ್ರೀತಿಯ ಮಗಳು

______________

ಗೆ

......................................

......................................

......................................

ಆ. ಬಿಳಿಗಿರಿರಂಗನ ಬೆಟ್ಟಕ್ಕೆ ಪ್ರವಾಸ ಏರ್ಪಡಿಸುವಂತೆ ಕೋರಿ ಶಾಲಾ ಮುಖ್ಯಸ್ಥರಿಗೆ ಪತ್ರ ಬರೆಯಿರಿ.

☆ ☆ ☆ ☆ ☆

# ೫. ಜ್ಯೋತಿಯೇ ಆಗು ಜಗಕೆಲ್ಲ (ಪದ್ಯ)

– ಜನಪದ ಗೀತೆ

ಆಚಾರಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು । ನನಕಂದ
ಜ್ಯೋತಿಯೇ ಆಗು ಜಗಕೆಲ್ಲ ॥ ೧ ॥

ಸಂಸಾರವೆಂಬುದು ಸಾಗರ ಹೊಳೆಯಪ್ಪ
ಈಸಬಲ್ಲವನಿಗೆ ಎದೆಯುದ್ದ । ನನಕಂದ
ಓದುಬಲ್ಲವನಿಗೆ ಕೈಲಾಸ ॥ ೨ ॥

ಬಂಗಾರದ ಬಳೆತೊಟ್ಟು ಬೈಬ್ಯಾಡ ಬಡವರ
ಬಂಗಾರ ನಿನಗೆ ಸ್ಥಿರವಲ್ಲ । ಮದ್ದಿನದ
ಹೊತ್ತು ಹೊರಳೋದು ತಡವಲ್ಲ ॥ ೩ ॥

ಕೊಟ್ಟು ಕುದಿಯಲುಬೇಡ ಇಟ್ಟು ಹಂಗಿಸಬೇಡ
ಎಷ್ಟುಂಡರೆಂದು ಅನಬೇಡ । ಇವು ಮೂರು
ಮುಟ್ಟುವದು ಶಿವನ ಬಳಿಯಲ್ಲಿ ॥ ೪ ॥

ಅಕ್ಕ ಇದ್ದರೆ ಭಾವ ರೊಕ್ಕ ಇದ್ದರೆ ಸಂತೆ
ಮಕ್ಕಳಿದ್ದರೆ ಮನಿಮಾರು । ಹಡೆದವ್ವ
ನೀ ಇದ್ದರೆ ನಮಗ ಸಾಂರಾಜ್ಯ ॥ ೫ ॥

ಉಂಡಾಗ ಉಡುವಾಗ ಜನವೆಲ್ಲ ನೆಂಟರು
ಅಡವಿಯ ಸೊಪ್ಪು ತಲೆಯಲ್ಲಿ । ತಪ್ಪಾಗ
ಒಡಹುಟ್ಟಿದಣ್ಣ ಮುಖನೋಡ ॥ ೬ ॥



**ಕೃತಿ–ಕರ್ತೃ ಪರಿಚಯ**

ಜನಪದ ಗೀತೆಗಳು ತ್ರಿಪದಿಯಲ್ಲಿದ್ದು ಬದುಕಿನ ವಿವಿಧ ಸನ್ನಿವೇಶಗಳನ್ನು ಹೇಳುತ್ತವೆ. ನಿರಕ್ಷರಸ್ಥರಾಗಿದ್ದ ಗ್ರಾಮೀಣರು ತಮ್ಮ ಜೀವನಾನುಭವಗಳನ್ನು ಸಹಜವಾಗಿ ಅಭಿವ್ಯಕ್ತಿಸುವ ಜನಪದ ಸಾಹಿತ್ಯ ಕಂಠಸ್ಥ ಸಂಪ್ರದಾಯದಲ್ಲಿ ಬಂದಿದೆ. ಶುದ್ಧ ದೇಸೀಯ ಸೊಗಡನ್ನು ಹೊಂದಿರುವ ಜನಪದ ಗೀತೆಗಳು ಸತ್ವಯುತವಾಗಿದ್ದು, ವಿವೇಕವನ್ನು ಹೇಳುವ ನೀತಿವಾಕ್ಯಗಳಾಗಿವೆ.

ತಾಯಿ ತನ್ನ ಮಗುವಿಗೆ ಹೇಳುವ ವಿವೇಕ, ಜೀವನದ ಮಾರ್ಗವನ್ನು ಸೂಚಿಸುವ ಕೈದೀವಿಗೆಗಳಾಗಿವೆ. ಸಮಾಜದಲ್ಲಿ ಹೇಗೆ ಬಾಳಬೇಕೆಂಬ ಜೀವನ ಪಾಠವಾಗಿದೆ. ಪ್ರಕೃತ ತ್ರಿಪದಿಗಳನ್ನು ದೇ. ಜವರೇಗೌಡ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಸಂಪಾದಿಸಿರುವ **'ಜನಪದ ಗೀತಾಂಜಲಿ'** ಮತ್ತು ಹಲಸಂಗಿ ಗೆಳೆಯರಿಂದ ಸಂಪಾದಿತ **'ಗರತಿಯ ಹಾಡು'** ಸಂಕಲನಗಳಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.

## – ಓದಿ ತಿಳಿಯಿರಿ –

ಆಚಾರ – ಸಂಪ್ರದಾಯ, ಒಳ್ಳೆಯ ನಡತೆ, ಪರಂಪರೆ, ಸಂಸ್ಕೃತಿ

ಅರಸ – ರಾಜ

ಪ್ರಭು – ಯಜಮಾನ, ಒಡೆಯ, ರಾಜ

ಜ್ಯೋತಿ – ಬೆಳಕು, ದೀಪ

ಸಾಗರ – ಸಮುದ್ರ, ಕಡಲು

ಬಂಗಾರ – ಚಿನ್ನ

ಹಂಗಿಸು – ಮೂದಲಿಸು, ಟೀಕಿಸು, ವ್ಯಂಗ್ಯ ಮಾತಾಡು

ರೊಕ್ಕ – ಹಣ, ರೂಪಾಯಿ

ಹೊತ್ತು – ಸಮಯ, ಕಾಲ,

ಸಂಸಾರ – ಕುಟುಂಬ

ಅಡವಿ – ಅರಣ್ಯ, ಕಾಡು

## – ಗಮನಿಸಿರಿ –

ಚೂಡಾಮಣಿ – ತಲೆಯಲ್ಲಿ ಧರಿಸುವ ರತ್ನದ ಆಭರಣ, ಶ್ರೇಷ್ಠ ವ್ಯಕ್ತಿ

ಸಂವರಾಜ್ಯ – ಸಾಮ್ರಾಜ್ಯ, ಚಕ್ರವರ್ತಿಯ ವಿಸ್ತಾರವಾದ ರಾಜ್ಯ

ಹೊತ್ತು ಹೊರಳು – ಕಾಲ ಬದಲಾವಣೆ

ಕೈಲಾಸ – ಬೆಳ್ಳಿಬೆಟ್ಟ, ಶಿವನನೆಲೆ

ಮದ್ದಿನ – ಮಧ್ಯಾಹ್ನ



## – ಅಭ್ಯಾಸ –

**ಅ. ಖಾಲಿ ಇರುವ ಸ್ಥಳವನ್ನು ಆವರಣದಲ್ಲಿ ಕೊಟ್ಟಿರುವ ಸೂಕ್ತ ಪದದಿಂದ ತುಂಬಿರಿ:**

೧. ಆಚಾರಕರಸಾಗು ____________ ಪ್ರಭುವಾಗು
(ಮಾತಿಗೆ, ನೀತಿಗೆ, ಭಾಷೆಗೆ, ವಿಚಾರಕ್ಕೆ)

೨. ಸಂಸಾರ ಎಂಬುದು ________ ಹೊಳೆಯಪ್ಪ
(ನದಿ, ಕೆರೆ, ಸಾಗರ, ಸಮಾಜ)

೩. ಬಂಗಾರಬಳೆತೊಟ್ಟು ಬೈಬ್ಯಾಡ ______________
(ಬಡವರ, ಶ್ರೀಮಂತರ, ನೌಕರರ, ಕಾರ್ಮಿಕರ)

೪. ಮಕ್ಕಳಿದ್ದರೆ _____________ ಹಡೆದವ್ವ
(ತಲೆಮಾರು, ಮನಿಮಾರು, ಕಾರುಬಾರು, ತಕರಾರು)

೫. ಉಂಡಾಗ ಉಡುವಾಗ ಜನವೆಲ್ಲ __________
(ಬಂಟರು, ತುಂಟರು, ನೆಂಟರು, ಕುಂಟರು)

**ಆ. ಈ ಪದಗಳ ಗ್ರಾಂಥಿಕ ರೂಪ ಬರೆಯಿರಿ:**

*ಮಾದರಿ : ಬೈಬ್ಯಾಡ – ಬೈಯ್ಯಬೇಡ*

ಹೊರಳೋದು, ಸಂವರಾಜ್ಯ, ನಮಗ, ಮುಟ್ಟುವದು

**ಇ. ಈ ಪದಗಳಿಗಿರುವ ಸಮಾನ ಅರ್ಥಗಳನ್ನು ಬರೆಯಿರಿ:**

ಅರಸ, ಕಂದ, ಹಂಗಿಸು, ಬಂಗಾರ, ಅಡವಿ, ಸಾಗರ

**ಈ. ಈ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಬಳಸಿ:**

ಅರಸ, ಹಂಗಿಸು, ಬಡವರು, ಸ್ಥಿರ, ರೊಕ್ಕ, ಸೊಪ್ಪು

**ಉ. ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ಜನಪದ ತಾಯಿ ಯಾವುದಕ್ಕೆ ಅರಸನಾಗಬೇಕೆಂದು ಬಯಸಿದ್ದಾಳೆ?

೨. ಸಂಸಾರ ಯಾರಿಗೆ ಕೈಲಾಸವಾಗಬಲ್ಲದು?

೩. ತಾಯಿ ಯಾವುದು ಸ್ಥಿರವಲ್ಲವೆಂದು ಹೇಳಿದ್ದಾಳೆ?

೪. ಹಂಗಿಸುವ ಮಾತು ಯಾರಿಗೆ ಮುಟ್ಟುತ್ತದೆ?

೫. ಸಂವರಾಜ್ಯ ಯಾರಿದ್ದರೆ ಸಿಕ್ಕಂತಾಗುತ್ತದೆ?

೬. ಒಡಹುಟ್ಟಿದಣ್ಣನೂ ಮುಖ ನೋಡದಿರುವುದು ಯಾವಾಗ?

**ಊ. ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ತಾಯಿ ತನ್ನ ಮಗ ಏನಾಗಬೇಕೆಂದು ಬಯಸಿದ್ದಾಳೆ?

೨. ಸಂಸಾರ ಎಂಬುದು ಹೇಗಿರುತ್ತದೆ?

೩. ಯಾವ ಮೂರು ಮಾತುಗಳು ಶಿವನಿಗೆ ಮುಟ್ಟುವುವು?

## – ಭಾಷಾಭ್ಯಾಸ –

**ಅ. ಅಭ್ಯಾಸ ಚಟುವಟಿಕೆ**

೧. ಈ ಪದ್ಯವನ್ನು ಸಾಮೂಹಿಕವಾಗಿ ಹಾಡಿರಿ

೨. ಈ ಪದ್ಯದ ೨, ೪ ಮತ್ತು ೫ನೆಯ ತ್ರಿಪದಿಗಳನ್ನು ಕಂಠಪಾಠ ಮಾಡಿರಿ

೩. ವಿವಿಧ ಗ್ರಂಥಗಳಿಂದ ತ್ರಿಪದಿಗಳನ್ನು ಸಂಗ್ರಹಿಸಿರಿ

೪. ಜನಪದ ಸಾಹಿತ್ಯದ ವಿವಿಧ ಪ್ರಕಾರಗಳನ್ನು ನಿಮ್ಮ ಅಧ್ಯಾಪಕರಿಂದ ಕೇಳಿ ತಿಳಿಯಿರಿ

**ಆ. ಈ ಪದಗಳ ಸ್ತ್ರೀ ಲಿಂಗ ರೂಪ ಬರೆಯಿರಿ:**

ಅರಸ, ಅಣ್ಣ, ಬಲ್ಲವ, ಅಜ್ಜ, ದೊಡ್ಡಪ್ಪ

**ಇ. ಈ ಪದಗಳನ್ನು ಮಾದರಿಯಂತೆ ವಿಂಗಡಿಸಿ ಬರೆಯಿರಿ:**

***ಮಾದರಿ : ಹಡೆದ + ಅವ್ವ***

ಜಗಕೆಲ್ಲ, ಸಂಸಾರವೆಂಬುದು, ಬಳೆಯಿಟ್ಟು, ತಡವಲ್ಲ, ಎಷ್ಟುಂಡರು, ಬಳಿಯಲ್ಲಿ, ಮಕ್ಕಳಿದ್ದರೆ, ತಲೆಯಲ್ಲಿ



**ಈ. ಮೊದಲೆರಡು ಪದಗಳಿಗೆ ಸಂಬಂಧಿಸಿದಂತೆ ಮೂರನೆಯ ಪದವನ್ನು ತಿಳಿಸಿರಿ:**

೧. ವ್ಯಂಜನ + ವ್ಯಂಜನ = ಸಂಯುಕ್ತಾಕ್ಷರ : ವ್ಯಂಜನ + ಸ್ವರ =

೨. ರಕ್ತ = ವಿಜಾತಿಯ ಸಂಯುಕ್ತಾಕ್ಷರ : ಅಜ್ಜ =

೩. ಕ್ + ಔ = ಕೌ : ಕ್ + ಐ =

೪. ಕೈಲಾಸ = ಕ್+ಐ ಲ್+ಆ ಸ್+ಅ : ಹಡೆದವ್ವ =

**ಉ. ಈ ವಾಕ್ಯಗಳನ್ನು ಗಮನವಿಟ್ಟು ಓದಿ, ಗೆರೆ ಎಳೆದ ಪದಗಳನ್ನು ಗಮನಿಸಿರಿ:**

೧. ದೇವರು ಒಳ್ಳೆಯದನ್ನು <u>ಮಾಡಲಿ</u>

೨. ಒಡಹುಟ್ಟಿದಣ್ಣ ಮುಖ <u>ನೋಡಿದನು</u>

'ಮಾಡಲಿ', 'ನೋಡಿದನು' ಎಂಬ ಪದಗಳು ಕೆಲಸವನ್ನು ಸೂಚಿಸುತ್ತವೆ. ಹೀಗೆ ಪೂರ್ಣಗೊಂಡು ಕ್ರಿಯೆಯ ಅರ್ಥವನ್ನು ಕೊಡುವ ಪದಗಳೇ ಕ್ರಿಯಾಪದಗಳು.

ಒಂದು ಪೂರ್ಣ ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳಿರುತ್ತವೆ.

*ಉದಾ:* 'ರಮೇಶನು ಪಾಠವನ್ನು ಓದಿದನು' ಎಂಬಲ್ಲಿ 'ರಮೇಶ' ಕರ್ತೃ ಪದ. 'ಪಾಠವನ್ನು' ಕರ್ಮಪದ, 'ಓದಿದನು' ಕ್ರಿಯಾಪದ. ಅಂದರೆ ಯಾರು ಓದಿದರು? ಎಂಬ ಪ್ರಶ್ನೆಗೆ ರಮೇಶ ಎಂಬ ಉತ್ತರ ಬರುತ್ತದೆ. 'ಏನನ್ನು ಓದಿದನು?' ಎಂದರೆ 'ಪಾಠವನ್ನು ಓದಿದನು' ಎಂಬ ಕೆಲಸವನ್ನು ತಿಳಿಸುತ್ತವೆ. ಹೀಗೆ ವಾಕ್ಯ ಪೂರ್ಣವಾಗುತ್ತದೆ. (ಸೂಚನೆ: ಕರ್ಮಪದವು ಇಲ್ಲದೆಯೂ ವಾಕ್ಯವು ಪೂರ್ಣ ಅರ್ಥವನ್ನು ಕೊಡಬಹುದು.)

**ಊ.ಈ ವಾಕ್ಯಗಳಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳನ್ನು ಗುರುತಿಸಿರಿ:**

೧. ಅರಸನು ರಾಜ್ಯವನ್ನು ರಕ್ಷಿಸಿದನು

೨. ವಿದ್ಯಾರ್ಥಿಗಳು ಉತ್ತರವನ್ನು ಬರೆದರು

೩. ರಾಮನು ರಾವಣನನ್ನು ಕೊಂದನು

ಕ್ರಿಯಾಪದದ ಮೂಲರೂಪಕ್ಕೆ ಧಾತು ಅಥವಾ ಕ್ರಿಯಾ ಪ್ರಕೃತಿ ಎನ್ನುತ್ತಾರೆ ಅಂದರೆ ಪ್ರತ್ಯಯವನ್ನು ಹೊಂದದೆ ಇರುವ ಕ್ರಿಯಾಪ್ರಕೃತಿಯೇ **'ಧಾತು'**.

ರಕ್ಷಿಸಿದನು – ರಕ್ಷಿಸು

ಓದಿದನು – ಓದು

ಬಂದನು – ಬರು

ಹೋದಳು – ಹೋಗು

**– ಚಟುವಟಿಕೆ –**

**ಅ. ಈ ಮಾತುಗಳನ್ನು ಗಮನಿಸಿ:**

- ಅಕ್ಕ ಇದ್ದರೆ ಭಾವ, ರೊಕ್ಕ ಇದ್ದರೆ ಸಂತೆ
- ಉಂಡಾಗ ಉಡುವಾಗ ಜನವೆಲ್ಲ ನಂಟರು
- ಕೊಟ್ಟು ಕುದಿಯಬೇಡ ಇಟ್ಟು ಹಂಗಿಸಬೇಡ

**ಆ. ಈ ತ್ರಿಪದಿಯನ್ನು ಗದ್ಯರೂಪದಲ್ಲಿ ಬರೆಯಿರಿ:**

ಆಚಾರಕರಸಾಗು ನೀತಿಗೆ ಪ್ರಭುವಾಗು

ಮಾತಿನಲಿ ಚೂಡಾಮಣಿಯಾಗು ನನಕಂದ

ಜ್ಯೋತಿಯೇ ಆಗು ಜಗಕೆಲ್ಲ

**ಇ. ಈ ಸಾಲುಗಳಲ್ಲಿರುವ ವಿಶೇಷ ಪದಗಳನ್ನು ಗುರುತಿಸಿ ಬರೆಯಿರಿ ಮತ್ತು ಅವು ಗುಣವನ್ನು ಸೂಚಿಸುವುದನ್ನು ಗಮನಿಸಿರಿ:**

- ಈ ಕಟ್ಟಡ ಬಹಳ ಎತ್ತರವಾಗಿದೆ
- ಲಕ್ಷ್ಮಿಯು ಬುದ್ಧಿವಂತ ವಿದ್ಯಾರ್ಥಿನಿ
- ಇಷ್ಟೊಂದು ಅನ್ನ ಉಂಡರು
- ಬಂಗಾರದಂಥಹ ಹುಡುಗ

**ಈ. ಈ ಪದಗಳ ಗುಂಪಿನಲ್ಲಿ ಸಜಾತೀಯ ಮತ್ತು ವಿಜಾತೀಯ ಒತ್ತಕ್ಷರದ ಪದಗಳನ್ನು ವಿಂಗಡಿಸಿ ಬರೆಯಿರಿ:**

ಜ್ಯೋತಿ, ಅಕ್ಕ, ಸ್ಥಿರ, ಇದ್ದರೆ, ಸ್ತ್ರೀ, ತಡವಲ್ಲ, ದಿವ್ಯ, ಹಡೆದವ್ವ, ಸೊಪ್ಪು, ರಾಜ್ಯ, ಇಷ್ಟು, ಭಕ್ತಿ, ರೊಕ್ಕ

**ಉ. ಪೂರಕ ಅಭ್ಯಾಸ**

- ಜನಪದ ಗೀತಾಂಜಲಿ ಮತ್ತು ಗರತಿಯ ಹಾಡು ಸಂಕಲನಗಳನ್ನು ಓದಿ.
- ಜನಪದ ತ್ರಿಪದಿಗಳ ಬಗೆಗೆ ಮಾಹಿತಿ ಪಡೆಯಿರಿ.

☆☆☆☆☆

# ೬. ಛಲಗಾತಿಯ ಸವಾಲು (ಗದ್ಯ)



'ಎಲ್ಲಾ ಬಾಗಿಲುಗಳು ಮುಚ್ಚಿದ್ದರೂ, ಎಲ್ಲೋ ಒಂದು ಸಣ್ಣ ಕಿಂಡಿಯಿಂದ ಬೆಳಕುಹರಿದು ಬರುತ್ತದೆ' – ಇದು ಮಾಲತಿ ಹೊಳ್ಳರ ಬದುಕಿನ ಸತ್ಯ. ಪೋಲಿಯೋ ಎಂಬ ಭಯಂಕರ ವ್ಯಾಧಿಗೆ ತುತ್ತಾಗಿ, ಕಾಲುಗಳು ಶಕ್ತಿಹೀನವಾದರೂ, ಕ್ರೀಡಾಲೋಕದಲ್ಲಿ ವಿಶ್ವವೇ ಬೆರಗಾಗುವಂಥ ಸಾಧನೆಯನ್ನು ಮಾಡಿದವರು ಮಾಲತಿ ಹೊಳ್ಳ. ವಿಧಿ ನೀಡಿದ ಅಂಗವಿಕಲತೆ ಈ ಸಾಧಕಿಯ ಪಾಲಿಗೆ ವರವಾಯಿತು.

ಮಾಲತಿ ಹೊಳ್ಳರ ತಂದೆ ಕೃಷ್ಣಮೂರ್ತಿ ಹೊಳ್ಳ, ತಾಯಿ ಪದ್ಮಾವತಿ. ಹೋಟೆಲ್ ವೃತ್ತಿಗಾಗಿ ದಕ್ಷಿಣ ಕನ್ನಡದ ಉಡುಪಿ ಜಿಲ್ಲೆಯ ಮಣ್ಣೂರು ಗ್ರಾಮದಿಂದ ಬೆಂಗಳೂರಿಗೆ ಬಂದವರು. ಇವರ ನಾಲ್ಕನೆಯ ಮಗುವಾಗಿ, ಜುಲೈ ೬, ೧೯೫೮ರಂದು ಮಾಲತಿ ಜನಿಸಿದರು. ದುರದೃಷ್ಟವಶಾತ್ ಒಂದು ವರ್ಷದ ಮಗು ಮಾಲತಿಗೆ ಪೋಲಿಯೋ ಆದಾಗ, ಮಗುವನ್ನು ಚೆನ್ನೈನಲ್ಲಿರುವ ದತ್ತಾತ್ರೇಯ ಮೆಡಿಕಲ್ ಸೆಂಟರ್ ಎಂಬ ಪುನರ್ವಸತಿ ಕೇಂದ್ರಕ್ಕೆ ಚಿಕಿತ್ಸೆಗಾಗಿ ಸೇರಿಸಿದರು. ಆಕೆಯ ಬಾಲ್ಯದ ಬಹುಭಾಗ ಇಲ್ಲಿಯೇ ಕಳೆಯಿತು.

ದೇಹದ ನರಗಳೆಲ್ಲ ಚೆಂಡಿನಂತೆ ಒಂದುಗೂಡುವುದು ಇವರ ಕಾಯಿಲೆಯ ಸ್ವರೂಪ. ಇದನ್ನು ತಪ್ಪಿಸಲು ಪ್ರತಿ ಆರು ತಿಂಗಳಿಗೊಮ್ಮೆ ಮಾಲತಿಗೆ ಶಸ್ತ್ರಚಿಕಿತ್ಸೆ ಆಗುತಿತ್ತು. ಇಂತಹ ೩೨ ಶಸ್ತ್ರಚಿಕಿತ್ಸೆಗಳನ್ನು ಅವರು ಎದುರಿಸಿದರು. ಆದಾಗ್ಯೂ, ಪ್ರತಿ ಪರೀಕ್ಷೆಯಲ್ಲೂ ಮಾಲತಿ ತರಗತಿಗೇ ಪ್ರಥಮಳಾಗಿರುತ್ತಿದ್ದರು.

೧೯೭೫ರಲ್ಲಿ, ಬೆಂಗಳೂರಿಗೆ ಹಿಂತಿರುಗಿದ ನಂತರ ಮಹಾರಾಣಿ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ತಂದೆಯ ಪ್ರೋತ್ಸಾಹದ ನುಡಿಗಳು ಮಾಲತಿಗೆ ಧೈರ್ಯ ನೀಡಿದವು. ಅದೇ ವರ್ಷ ರಾಷ್ಟ್ರೀಯ ಅಂಗವಿಕಲರ ಕ್ರೀಡಾಕೂಟದಲ್ಲಿ ಭಾಗವಹಿಸಿ ಎರಡು ಚಿನ್ನದ ಪದಕ, ಎರಡು ಬೆಳ್ಳಿಯ ಪದಕಗಳನ್ನು ಗಳಿಸಿದ ಮಾಲತಿ ಹೊಳ್ಳ ಸಾಧನೆಯ ಹಾದಿಯಲ್ಲಿ ಮುಂದುವರೆದರು. ಈ ಯಶಸ್ಸು ಕ್ರೀಡೆಗಳತ್ತ ಅವರ ಒಲವು ಬೆಳೆಯಲು ಕಾರಣವಾಯಿತು. ಒಮ್ಮೆ ಅಹಮದಾಬಾದಿನಲ್ಲಿ ನಡೆದ ಕ್ರೀಡಾಕೂಟದಲ್ಲಿ ಗಾಲಿಕುರ್ಚಿಯ ಓಟದ ಸ್ಪರ್ಧೆಗೆ ಬೇರೆ ಮಹಿಳಾ ಸ್ಪರ್ಧಿಗಳೇ ಇರಲಿಲ್ಲ. ಆಗ ಮಾಲತಿ ಪುರುಷ ಸ್ಪರ್ಧಿಗಳೊಂದಿಗೇ ಸ್ಪರ್ಧಿಸಬೇಕಾಯಿತು. ಅವರೆಲ್ಲ ಆಗಲೇ ಹೆಸರು ಮಾಡಿದವರು. ಅದ್ಭುತ ! ಮಾಲತಿಯೇ ಗೆದ್ದರು ! ಒಬ್ಬ ಮಹಿಳೆ ಪುರುಷರನ್ನು ಹಿಮ್ಮೆಟ್ಟಿಸಿ, ಬಹುಮಾನ ಪಡೆದಾಗ, ಅಭಿನಂದನೆಗಳ ಸುರಿಮಳೆಯೇ ಆಯಿತು. ಕೊರಿಯಾ, ಡೆನ್ಮಾರ್ಕ್, ಬೀಜಿಂಗ್, ಬ್ಯಾಂಕಾಕ್, ಬೆಲ್ಜಿಯಂ, ಬರ್ಮಿಂಗ್‌ಹ್ಯಾಂ, ಮ್ಯಾಂಚೆಸ್ಟರುಗಳಲ್ಲಿ ನಡೆದ ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಏಷಿಯಾಡ್ ಕ್ರೀಡಾ ಕೂಟಗಳಲ್ಲಿ

ಗಾಲಿಕುರ್ಚಿ ಓಟ, ಗುಂಡು ಎಸೆತ, ತಟ್ಟೆ ಎಸೆತ, ಈಟಿ ಎಸೆತ ಸ್ಪರ್ಧೆಗಳಲ್ಲಿ ಮಾಲತಿ ಹೊಳ್ಳ ಭಾಗವಹಿಸಿ, ವಿಜಯಿಯಾದಾಗ, ಇಡೀ ವಿಶ್ವವೇ ಅವರತ್ತ ತಿರುಗಿತು. ಬರ್ಮಿಂಗ್‌ಹ್ಯಾಂಗೆ ಹೋದಾಗ, ಬಸ್‌ನಿಂದ ಬಿದ್ದು, ಮೂಳೆ ಮುರಿದರೂ, ಅವರ ಉತ್ಸಾಹ ಮಾತ್ರ ತಗ್ಗಲಿಲ್ಲ. ಇದು ಅವರಿಗೆ ೧೭ನೇ ಮೂಳೆ ಮುರಿತ !

ಕ್ರೀಡಾ ಜಗತ್ತಿನಲ್ಲಿ ಮಾಲತಿ ಹೊಳ್ಳರ ಸಾಧನೆಯನ್ನು ಪರಿಗಣಿಸಿ, ಭಾರತ ಸರ್ಕಾರ ಅರ್ಜುನ ಪ್ರಶಸ್ತಿ (೧೯೯೫), ಪದ್ಮಶ್ರೀ ಪ್ರಶಸ್ತಿ (೨೦೦೧) ಗಳನ್ನು ನೀಡಿ ಗೌರವಿಸಿತು. ಕೆ.ಕೆ. ಬಿರ್ಲಾ ಪ್ರಶಸ್ತಿ, ಅಮೆರಿಕನ್ ಬಯೋಗ್ರಾಫಿಕಲ್ ಇನ್‌ಸ್ಟಿಟ್ಯೂಟ್‌ನ ವರ್ಷದ ಮಹಿಳಾ ಪ್ರಶಸ್ತಿ, ಇಂಗ್ಲೆಂಡಿನ ಅಂತಾರಾಷ್ಟ್ರೀಯ ಬಯೋಗ್ರಾಫಿಕಲ್ ಕೇಂದ್ರದ ಅಂತಾರಾಷ್ಟ್ರೀಯ ಮಹಿಳಾ ಪ್ರಶಸ್ತಿ, ಕರ್ನಾಟಕ ಸರ್ಕಾರದ ಏಕಲವ್ಯ ಪ್ರಶಸ್ತಿ, ಮುಂತಾದ ೩೦ಕ್ಕೂ ಮೀರಿ ಪ್ರತಿಷ್ಠಿತ ಪ್ರಶಸ್ತಿಗಳಿಗೆ ಮಾಲತಿ ಹೊಳ್ಳ ಭಾಜನರಾಗಿದ್ದಾರೆ.

ಅಭಿನಯ ಜಗತ್ತಿಗೂ ಮಾಲತಿ ಹೊಳ್ಳ ಹೊರತಾಗಿಲ್ಲ. ಡಾ॥ ರಾಜ್‌ಕುಮಾರ್ ಅವರೊಡನೆ ಕಾಮನಬಿಲ್ಲು ಚಲನಚಿತ್ರದಲ್ಲಿ ಅಭಿನಯಿಸುವ ಮೂಲಕ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಮಾಲತಿ ಹೊಳ್ಳ ಸಿಂಡಿಕೇಟ್ ಬ್ಯಾಂಕ್ ಉದ್ಯೋಗಿ. ವಿಧಿ ಬದುಕಿನಲ್ಲಿ ಕೊಟ್ಟ ನೋವನ್ನು ನುಂಗಿ, ವಿಶ್ವವೇ ಬೆರಗಾಗುವಂತೆ ಬೆಳೆದಿರುವುದರಲ್ಲಿ ಅವರ ಪರಿಶ್ರಮವಿದೆ. ಅವರ ಸಾಧನೆಯನ್ನು ಕುರಿತು ಬರೆಯಲಾದ ಪ್ರೌಢ ಪ್ರಬಂಧ ಒಂದಕ್ಕೆ ಡಾಕ್ಟರೇಟ್ ಪದವಿ ಲಭಿಸಿದೆ.

ತಮ್ಮಂತೆಯೇ ವಿಕಲಚೇತನರಾದ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಆಶ್ರಯ, ಶಿಕ್ಷಣ, ವೈದ್ಯಕೀಯ ನೆರವು ನೀಡುವ ಸಲುವಾಗಿ ಮಾತೃ ಫೌಂಡೇಶನ್ ಎಂಬ ಸೇವಾ ಸಂಸ್ಥೆಯನ್ನು ಪ್ರಾರಂಭಿಸಿದ್ದಾರೆ. ಸದಾ ಚಟುವಟಿಕೆ ಅವರ ಯಶಸ್ಸಿನ ಗುಟ್ಟು. ಕೀಳರಿಮೆಗಿಂತ ಮಿಗಿಲಾದ ಅಂಗವೈಕಲ್ಯವಿಲ್ಲ. ನಾವು ನಗುತ್ತಲೇ ಜೀವನವನ್ನು ಎದುರಿಸಬೇಕು ಎನ್ನುವುದು ಅವರ ಸಿದ್ಧಾಂತ.

ಮಾಲತಿ ಹೊಳ್ಳರ ಜೀವನ ವಿಕಲಚೇತನರಿಗೆ ಮಾತ್ರವಲ್ಲ, ಎಲ್ಲ ಮಹಿಳೆಯರಿಗೂ ಸ್ಫೂರ್ತಿದಾಯಕ. ಛಲಗಾತಿ ಮಾಲತಿ ವಿಕಲಚೇತನರ ಕ್ರೀಡಾಪ್ರಪಂಚದಲ್ಲಿ ಹಲವು ದಾಖಲೆಗಳನ್ನು ನಿರ್ಮಿಸಿ, ಭಾರತದ ಕೀರ್ತಿಯನ್ನು ಹೆಚ್ಚಿಸಿದ್ದಾರೆ.



## – ಓದಿ ತಿಳಿಯಿರಿ –

| | | | |
|---|---|---|---|
| ವ್ಯಾಧಿ | – ರೋಗ | ಸಮತೋಲನ | – ಸಮತೂಕ |
| ವೃತ್ತಿ | – ಉದ್ಯೋಗ | ಅನಿವಾರ್ಯ | – ತಪ್ಪಿಸಲಾಗದ |
| ಭಾಜನ | – ಪಾತ್ರ | ಸ್ಫೂರ್ತಿ | – ಪ್ರೇರಣೆ |
| ಪುನರ್ವಸತಿ ಕೇಂದ್ರ | – ಆಶ್ರಯ ಕೇಂದ್ರ | ಸ್ವಾಭಿಮಾನ | – ಆತ್ಮಗೌರವ |
| ಯಶಸ್ಸು | – ಗೆಲವು | ಸ್ವಾವಲಂಬನೆ | – ಇನ್ನೊಬ್ಬರನ್ನು ಆಶ್ರಯಿಸದಿರುವುದು |
| ಮಿನುಗು | – ಹೊಳೆಯುವುದು | ದಾಖಲೆ | – ಯಾರು ಮಾಡಲಾಗದ್ದು, ವಿಕ್ರಮ |
| ಪರಿಶ್ರಮ | – ವಿಶೇಷ ಶ್ರಮ | ಸಿದ್ಧಾಂತ | – ನಿರ್ಧರಿಸಲ್ಪಟ್ಟ ತತ್ತ್ವ |

## – ಗಮನಿಸಿರಿ –

ಪೋಲಿಯೋ – ಮಕ್ಕಳಿಗೆ ಬರುವ ಈ ವ್ಯಾಧಿಯಿಂದ ಕೈಕಾಲುಗಳು ಶಕ್ತಿಹೀನವಾಗಿ, ಶರೀರ ದುರ್ಬಲತೆಯನ್ನು ಹೊಂದುತ್ತದೆ.

ಪುನರ್ವಸತಿ ಕೇಂದ್ರ – ಚಿಕಿತ್ಸೆ ಹಾಗೂ ವಸತಿ ವ್ಯವಸ್ಥೆ ಇರುವ ಸೇವಾಕೇಂದ್ರ. ಮನೆಯಲ್ಲಿ ಕೊಡಿಸಲಾಗದ ಚಿಕಿತ್ಸೆ ಹಾಗೂ ಸೇವಾಸೌಲಭ್ಯಗಳನ್ನು ಇಂತಹ ಕೇಂದ್ರಗಳು ನಿರ್ವಹಿಸುತ್ತವೆ.

ಅಭಿನಂದನೆ – ಯಶಸ್ಸು ಸಾಧಿಸಿದಾಗ ಪ್ರಶಂಸಿಸುವ ರೀತಿ.

ಸಂಶೋಧನಾ ಪ್ರಬಂಧ – ಯಾವುದಾದರೊಂದು ವಿಷಯ ಕುರಿತು ದೀರ್ಘ ವಿವರಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿ ಬರೆದ ಅಧ್ಯಯನಪೂರ್ಣ ಬರಹ.

ಗಾಲಿ ಕುರ್ಚಿ – ನಡೆಯಲಾರದವರಿಗಾಗಿ ನಿರ್ಮಿಸಿರುವ ಚಕ್ರಗಳುಳ್ಳ ಕುರ್ಚಿ

## – ಅಭ್ಯಾಸ –

**ಅ. ಹೊಂದಿಸಿ ಬರೆಯಿರಿ:**

| ಅ | ಆ |
|---|---|
| ೧. ಪೋಲಿಯೋ | ೧) ಚೆನ್ನೈ |
| ೨. ಕಾಮನಬಿಲ್ಲು | ೨) ಇಂಗ್ಲೆಂಡ್ |
| ೩. ಮಣ್ಣೂರು | ೩) ವ್ಯಾಧಿ |
| ೪. ದತ್ತಾತ್ರೇಯ ಮೆಡಿಕಲ್ ಸೆಂಟರ್ | ೪) ಚಲನಚಿತ್ರ |
| ೫. ಬಯೋಗ್ರಾಫಿಕಲ್ ಕೇಂದ್ರ | ೫) ಉಡುಪಿ ಜಿಲ್ಲೆ |
| | ೬) ರಾಜ್ಯ ಪ್ರಶಸ್ತಿ |

**ಆ. ಈ ವಾಕ್ಯಗಳಲ್ಲಿ ಸರಿ–ತಪ್ಪುಗಳನ್ನು ಗುರುತಿಸಿ. ತಪ್ಪಾದರೆ ಕಾರಣ ಕೊಡಿ:**

೧. ತಂದೆ ತಾಯಿಗಳಿಗೆ ಮೂರನೆಯ ಮಗುವಾಗಿ ಮಾಲತಿ ಜನಿಸಿದರು. ಸರಿ / ತಪ್ಪು

೨. ಮಾಲತಿ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಬೆಂಗಳೂರಿನಲ್ಲಿ ಮಾಡಿದರು. ಸರಿ / ತಪ್ಪು

೩. ಚೆನ್ನೈನ ಪುನರ್ವಸತಿ ಕೇಂದ್ರದ ಹೆಸರು ದತ್ತಾತ್ರೇಯ ಮೆಡಿಕಲ್ ಸೆಂಟರ್. ಸರಿ / ತಪ್ಪು

೪. ಮಾಲತಿ ಹೊಳ್ಳ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾರೆ. ಸರಿ / ತಪ್ಪು

೫. ಮಾತೃ ಫೌಂಡೇಷನ್ ಎಂಬುದು ಮಾಲತಿ ಹೊಳ್ಳ ಸ್ಥಾಪಿಸಿದ ಸೇವಾಸಂಸ್ಥೆ ಸರಿ / ತಪ್ಪು

ಇ. **ಆವರಣದಲ್ಲಿನ ಪದಗಳಲ್ಲಿ ಸೂಕ್ತವಾದುದನ್ನು ಆಯ್ದು ಬಿಟ್ಟಿರುವ ಸ್ಥಳವನ್ನು ತುಂಬಿರಿ:**

೧. ಪೋಲಿಯೋ ಎಂಬುದು ____________ ಬರುವ ವ್ಯಾಧಿ. (ಮಕ್ಕಳಿಗೆ, ವಯಸ್ಕರಿಗೆ)

೨. ಮಾತ್ರ ಫೌಂಡೇಶನ್ ________ ಪ್ರದೇಶದ ಮಕ್ಕಳಿಗಾಗಿ ಸ್ಥಾಪಿಸಿದ ಸೇವಾಸಂಸ್ಥೆ (ನಗರ, ಗ್ರಾಮಾಂತರ)

೩. ಭಾರತ ಸರ್ಕಾರ ಮಾಲತಿ ಅವರಿಗೆ __________ ಪ್ರಶಸ್ತಿಯನ್ನು ೨೦೦೧ರಲ್ಲಿ ನೀಡಿತು. (ಪದ್ಮಭೂಷಣ, ಪದ್ಮಶ್ರೀ)

೪. ಮಾಲತಿ ಹೊಳ್ಳ ಅವರ ಕಾಲೇಜು ಶಿಕ್ಷಣ ________ ನಲ್ಲಿ ನಡೆಯಿತು. (ಬೆಂಗಳೂರು, ಮದ್ರಾಸು)

೫. ಮಾಲತಿ ಹೊಳ್ಳರ ತಂದೆ ತಾಯಿಗಳ ಊರು ______ ಜಿಲ್ಲೆಯಲ್ಲಿದೆ. (ಶಿವಮೊಗ್ಗ, ಉಡುಪಿ)

ಈ. **ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ಮಾಲತಿ ಹೊಳ್ಳರ ತಂದೆ ತಾಯಿಗಳ ಹೆಸರೇನು?

೨. ಮಾಲತಿ ಅವರಿಗೆ ಬಾಲ್ಯದಲ್ಲೇ ತಗುಲಿದ ರೋಗ ಯಾವುದು?

೩. ಮಾಲತಿ ಅವರು ಚೆನ್ನೈನಲ್ಲಿ ಚಿಕಿತ್ಸೆ ಪಡೆದ ಪುನರ್ವಸತಿ ಕೇಂದ್ರ ಯಾವುದು?

೪. ಮಾಲತಿ ಹೊಳ್ಳ ಗಳಿಸಿದ ಮೂರು ಮುಖ್ಯ ಪ್ರಶಸ್ತಿಗಳು ಯಾವುವು?

೫. ಮಾಲತಿ ಹೊಳ್ಳ ಯಾವ ಉದ್ಯೋಗದಲ್ಲಿದ್ದಾರೆ?

ಉ. **ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ಮಾಲತಿ ಹೊಳ್ಳರ ಬದುಕಿನ ಸತ್ಯ ಯಾವುದು?

೨. ಮಾಲತಿ ಅವರನ್ನು ಆಕ್ರಮಿಸಿದ ರೋಗದ ಲಕ್ಷಣವೇನು?

೩. ಕ್ರೀಡೆಗಳತ್ತ ಮಾಲತಿಗೆ ಒಲವು ಬೆಳೆಯಲು ಕಾರಣವೇನು?

೪. ಮಾಲತಿ ಹೊಳ್ಳ ಎಲ್ಲೆಲ್ಲಿ ನಡೆದ ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಭಾಗವಹಿಸಿದರು?

೫. ಸಾಮಾಜಿಕ ಸೇವೆಯಲ್ಲಿ ಮಾಲತಿ ಹೇಗೆ ಕ್ರಿಯಾಶೀಲರಾಗಿದ್ದಾರೆ?

೬. ಮಾಲತಿ ಅವರು ಕಂಡುಕೊಂಡ ಸಿದ್ಧಾಂತವೇನು?

ಊ. **ಈ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಬಳಸಿರಿ:**

ವೃತ್ತಿ, ಆಘಾತ, ನಿರಂತರ, ದಾಖಲೆ, ಮಿನುಗು, ಯಶಸ್ಸು, ಭಾಜನ, ಸ್ಫೂರ್ತಿ, ನೆರವು, ಪ್ರಶಸ್ತಿ

**ಋ. ಸಮಾನಾರ್ಥಕ ಪದಗಳನ್ನು ಸೂಚಿಸಿರಿ:**

| | | | |
|---|---|---|---|
| ಯಶಸ್ಸು | ______ | ಸಿದ್ಧಾಂತ | ______ |
| ಮಿನುಗು | ______ | ವೃತ್ತಿ | ______ |
| ಪರಿಶ್ರಮ | ______ | ಸ್ವಾಭಿಮಾನ | ______ |

## – ಭಾಷಾಭ್ಯಾಸ –

**ಅ. ಅಭ್ಯಾಸ ಚಟುವಟಿಕೆ**

೧. ಕರ್ನಾಟಕದ ಕ್ರೀಡಾಪಟುಗಳ ವಿವರ ಸಂಗ್ರಹಿಸಿ.

೨. ಕ್ರೀಡೆಗಳಲ್ಲದೆ, ಬೇರೆ ಬೇರೆ ಕ್ಷೇತ್ರಗಳಲ್ಲಿ ಹೆಸರು ಮಾಡಿದ ವಿಕಲಚೇತನರ ಹೆಸರುಗಳನ್ನು ಸಂಗ್ರಹಿಸಿ.

೩. ಅಂಗವಿಕಲರ ಪುನರ್ವಸತಿ ಕೇಂದ್ರಕ್ಕೆ ನಿಮ್ಮ ಅಧ್ಯಾಪಕರೊಂದಿಗೆ ಭೇಟಿ ನೀಡಿ ಅಲ್ಲಿರುವ ಮಕ್ಕಳೊಂದಿಗೆ ಸಂಭಾಷಿಸಿ, ವರದಿ ಬರೆಯಿರಿ.

**ಆ. ನಾಮ ಲಿಂಗ ವಚನ**

**ನಾಮ**

**ಹೆಸರುಗಳನ್ನು ತಿಳಿಸುವ ಪದವೇ** 'ನಾಮಪದ'

**ರೂಢಿಯಲ್ಲಿರುವ ಹೆಸರುಗಳು** 'ರೂಢನಾಮ'. ಉದಾ: ಹೆಂಗಸು, ಬಾಲಕ, ಪಟ್ಟಣ, ನದಿ.

**ವ್ಯಾವಹಾರದ ಉಪಯೋಗಕ್ಕೆ ಇಟ್ಟ ಹೆಸರುಗಳೇ** 'ಅಂಕಿತ ನಾಮ'. ಉದಾ: ರಾಮ, ಸೀತೆ, ಹುಬ್ಬಳ್ಳಿ, ಮೈಸೂರು.

**ಅರ್ಥಕ್ಕೆ ಅನುಗುಣವಾದ ಹೆಸರುಗಳು** 'ಅನ್ವರ್ಥ ನಾಮ'. ಉದಾ: ಕುರುಡ, ಕುಂಟ, ಹೆಳವ, ಯೋಗಿ.

**ನಾಮ ಪದಕ್ಕೆ ಬದಲಾಗಿ ಬಳಸುವ ಪದಗಳೇ** 'ಸರ್ವನಾಮ'. ಉದಾ: ಅವನು, ಅವಳು, ಅವರು

**ಲಿಂಗ**

'ಗಂಡು' ಎಂಬುದನ್ನು ಸೂಚಿಸುವ ಪದವೇ 'ಪುಲ್ಲಿಂಗ'. ಉದಾ: ರಾಜ, ಶಿವ, ಮುದುಕ, ಚಿಕ್ಕಪ್ಪ, ಕವಿ, ಶಿಕ್ಷಕ, ತಂದೆ, ಮಾವ, ಅಣ್ಣ, ತಮ್ಮ

'ಹೆಣ್ಣು' ಎಂಬುದನ್ನು ಸೂಚಿಸುವ ಪದ 'ಸ್ತ್ರೀಲಿಂಗ'. ಉದಾ: ರಾಣಿ, ಪಾರ್ವತಿ, ಮುದುಕಿ, ಚಿಕ್ಕಮ್ಮ, ಕವಯಿತ್ರಿ, ಶಿಕ್ಷಕಿ, ತಾಯಿ, ಅತ್ತೆ, ಅಕ್ಕ, ತಂಗಿ

ನಿರ್ದಿಷ್ಟವಾಗಿ ಲಿಂಗವನ್ನು ಸೂಚಿಸದ ಪದಗಳೇ 'ನಪುಂಸಕ ಲಿಂಗ'. ಉದಾ: ಎಲೆ, ಕಾಯಿ, ಗದ್ದೆ, ಹೊಲ, ಮಂಚ, ಮರ, ಕಲ್ಲು, ಹೊಳೆ, ಜಲ, ಹದ್ದು, ಪ್ರಾಣಿ.

**ವಚನ**

ನಾಮಪದದ ಪರಿಮಾಣವನ್ನು ಸೂಚಿಸುವ ಪದಗಳೇ 'ವಚನಗಳು'. ಒಂದೇ ವಸ್ತುವನ್ನು ಸೂಚಿಸುವ ಪದಗಳು ಏಕವಚನ, ಒಂದಕ್ಕಿಂತ ಹೆಚ್ಚಾದ ವಸ್ತುವನ್ನು ಸೂಚಿಸುವ ಪದಗಳು ಬಹುವಚನಗಳು.

ಏಕವಚನ – ಅರಸ, ಅರಸಿ, ಕಣ್ಣು, ಮರ, ಅಗಸ, ಹಣ್ಣು, ಪುಸ್ತಕ

ಬಹುವಚನ – ಅರಸರು, ಅರಸಿಯರು, ಕಣ್ಣುಗಳು, ಮರಗಳು, ಅಗಸರು, ಹಣ್ಣುಗಳು, ಪುಸ್ತಕಗಳು

ಏಕವಚನದಿಂದ ಬಹುವಚನಕ್ಕೆ ಬದಲಾಯಿಸಿದಾಗ ಪದಗಳಿಗೆ ರು, ಗಳು, ಅರು, ಅಂದಿರು, ಮುಂತಾದ ಪ್ರತ್ಯಯಗಳು ಸೇರುತ್ತವೆ.

**೧. ಈ ನಾಮಪದಗಳು ಯಾವ ಗುಂಪಿಗೆ ಸೇರುತ್ತವೆ, ಸೂಚಿಸಿ:**
ಕೃಷ್ಣ, ಗೌರಿ, ಹಳ್ಳಿ, ಪೆನ್ನು, ಅಂಗಿ, ಹಳ್ಳ, ಊರು, ಗಾಯಕ, ಶಿಲ್ಪಿ, ವ್ಯಾಪಾರಿ,

**೨. ಈ ಪದಗಳ ಲಿಂಗಗಳನ್ನು ಗುರುತಿಸಿ:**
ಶಂಕರ, ತಾಯಿ, ಕಾವೇರಿ, ಚಿಕ್ಕಮ್ಮ, ಅತ್ತೆ, ನಾದಿನಿ, ಭಾವ, ಮೈದುನ, ಕಲ್ಲು, ದೇವಾಲಯ

**೩. ಈ ಪದಗಳ ಬಹುವಚನ ರೂಪವನ್ನು ಬರೆಯಿರಿ:**
ಪುಸ್ತಕ, ಹಣ್ಣು, ಮಗು, ಹೆಂಗಸು, ಮಾವ, ಚೆಂಡು, ಕೈ, ಹೂ, ಗುರು, ಶಿಕ್ಷಕ

## – ಚಟುವಟಿಕೆ –

**ಅ. ಈ ಗಾದೆ ಮಾತುಗಳನ್ನು ಐದು ವಾಕ್ಯಗಳಲ್ಲಿ ವಿಸ್ತರಿಸಿ ಬರೆಯಿರಿ:**

೧. ಆಪತ್ತಿಗಾದವನೇ ನೆಂಟ

೨. ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ

**ಆ. ಈ ವಿಷಯಗಳನ್ನು ಕುರಿತು ಹತ್ತು ವಾಕ್ಯಗಳಿಗೆ ಮೀರದಂತೆ ಬರೆಯಿರಿ:**

೧. ಹವ್ಯಾಸಗಳು

೨. ಕೈದೋಟ

೩. ಪರಿಸರ ಮಾಲಿನ್ಯ

೪. ರಾಷ್ಟ್ರೀಯ ಹಬ್ಬಗಳು

☆ ☆ ☆ ☆ ☆

# ೭. ಭರತಭೂಮಿ ನನ್ನ ತಾಯಿ (ಪದ್ಯ)

– ಕುವೆಂಪು



ಭರತ ಭೂಮಿ ನನ್ನ ತಾಯಿ
ನನ್ನ ಪೊರೆವ ತೊಟ್ಟಿಲು
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು

ತುಹಿನ ಗಿರಿಯ ಸಿರಿಯ ಮುಡಿಯ
ಹಿರಿಯ ಕಡಲು ತೊಳೆಯುವಡಿಯ
ಪೈರು ಪಚ್ಚೆ ಪಸುರಿನುಡೆಯ
ಭರತ ಭೂಮಿ ನನ್ನ ತಾಯಿ
ನನ್ನ ಪೊರೆವ ತೊಟ್ಟಿಲು:
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು

ಸಿಂಧು, ಯಮುನೆ, ದೇವಗಂಗೆ
ತಪತಿ, ಕೃಷ್ಣೆ, ಭದ್ರೆ, ತುಂಗೆ
ಸಲಿಲ ತೀರ್ಥ ಪುಣ್ಯರಂಗೆ
ಭರತ ಭೂಮಿ ನನ್ನ ತಾಯಿ
ನನ್ನ ಪೊರೆವ ತೊಟ್ಟಿಲು:
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು

ಮತದ ಬಿರಕುಗಳನು ತೊರೆವೆ
ನುಡಿಗಳೊಡಕುಗಳನು ಮರೆವೆ
ತೊತ್ತ ತೊಡಕುಗಳನು ಬಿರಿವೆ
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು

ಭರತ ಭೂಮಿ ನನ್ನ ತಾಯಿ
ನನ್ನ ಪೊರೆವ ತೊಟ್ಟಿಲು:
ಸ್ವಾತಂತ್ರ್ಯದ ಸ್ವರ್ಗಕೇರೆ
ಪುಣ್ಯದೇಣಿ ಮೆಟ್ಟಲು!

## ಕೃತಿ–ಕರ್ತೃ ಪರಿಚಯ



ಕುವೆಂಪು ಎಂಬ ಕಾವ್ಯ ನಾಮದಿಂದ ಪ್ರಸಿದ್ಧರಾಗಿರುವ ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ ಅವರು (ಜನನ ೧೯೦೪) ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಕುಪ್ಪಳಿಯವರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಉಪಕುಲಪತಿಯಾಗಿ ಸೇವೆ ಸಲ್ಲಿಸಿದ್ದಾರೆ. 'ನವಿಲು, ಕಲಾಸುಂದರಿ, ಪಕ್ಷಿಕಾಶಿ, ಅನಿಕೇತನ, ಇಕ್ಷುಗಂಗೋತ್ರಿ' ಮೊದಲಾದ ಕವನ ಸಂಕಲನಗಳನ್ನು, 'ಮಲೆಗಳಲ್ಲಿ ಮದುಮಗಳು, ಕಾನೂರು ಸುಬ್ಬಮ್ಮ ಹೆಗ್ಗಡತಿ' ಎಂಬ ಕಾದಂಬರಿಗಳನ್ನು ಬರೆದಿದ್ದಾರೆ. 'ಶ್ರೀ ರಾಮಾಯಣ ದರ್ಶನಂ' ಅವರ ಮಹಾಕಾವ್ಯ, ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ ಮತ್ತು ಕರ್ನಾಟಕ ರತ್ನ ಪ್ರಶಸ್ತಿಗಳನ್ನು ಹಾಗು ರಾಷ್ಟ್ರಕವಿ ಪುರಸ್ಕಾರವನ್ನು ಪಡೆದಿದ್ದಾರೆ. 'ಭರತಭೂಮಿ ನನ್ನ ತಾಯಿ' ಕವಿತೆಯನ್ನು ಕುವೆಂಪು ಅವರ ಸಮಗ್ರ ಕಾವ್ಯ ಸಂಪುಟ ೧ರಿಂದ ಆಯ್ಕೆ ಮಾಡಲಾಗಿದೆ.

### – ಓದಿ ತಿಳಿಯಿರಿ –

| | | | |
|---|---|---|---|
| ಪೊರೆ | – ಕಾಪಾಡು, ಸಲಹು, ರಕ್ಷಿಸು | ಬಿಡುತೆ | – ಸ್ವಾತಂತ್ರ್ಯ, ಬಿಡುಗಡೆ |
| ಗುಡಿ | – ದೇವಾಲಯ, ಪತಾಕೆ, ಬಾವುಟ | ತುಹಿನ | – ಹಿಮ, ಮಂಜು |
| ಮುಡಿ | – ತಲೆ, ಧರಿಸು | ತೊತ್ತು | – ದಾಸಿ, ಸೇವಕಿ, ಊಳಿಗ |
| ಹೊರೆ | – ರಕ್ಷಿಸು, ಸಲಹು, ಭಾರ | ತೊರೆ | – ಬಿಡು, ತ್ಯಜಿಸು |
| ತೊಡರು | – ಕಟ್ಟು, ಬಂಧನ, ತೊಡಕು | ಹಿಂಭಾಗ | – ಹೊದಿಕೆ |
| ಮರೆ | – ಮರೆತುಬಿಡು | ಬಿರಿ | – ಒಡೆ, ಅರಳು, ಬಿರುಕು |
| ಬಿರುಕು | – ಒಡಕು, ಸೀಳು, ವೈಮನಸ್ಸು | ಏಣಿ | – ನಿಚ್ಚಣಿಕೆ |
| ಸಲಿಲ | – ನೀರು | | |



### – ಗಮನಿಸಿರಿ –

| | |
|---|---|
| ಭರತಭೂಮಿ | – ಭಾರತದೇಶ, ಭಾರತಾಂಬೆ |
| ಮತದ ಬಿರುಕು | – ಜಾತಿ ಮತಗಳಿಂದಾಗುವ ಒಡಕು |
| ಪೊರೆವ ತೊಟ್ಟಿಲು | – ರಕ್ಷಿಸುವ ಸ್ಥಾನ (ತೊಟ್ಟಿಲು) |
| ನುಡಿಗಳೊಡಕು | – ಭಾಷಾ ಭಿನ್ನತೆಯ ಭಾವ |
| ಜೀವನವನೆದೇವಿಗೆರೆವೆ | – ಸಮರ್ಪಣಾಭಾವ |

## – ಅಭ್ಯಾಸ –

**ಅ. ಹೊಂದಿಸಿ ಬರೆಯಿರಿ:**

| ಅ | ಆ |
|---|---|
| ೧. ಭರತಭೂಮಿ | ೧. ಸ್ವಾತಂತ್ರ್ಯ |
| ೨. ತುಹಿನ | ೨. ನನ್ನ ತಾಯಿ |
| ೩. ಪಕ್ಷಿಕಾಶಿ | ೩. ಪುರಸ್ಕಾರ |
| ೪. ರಾಷ್ಟ್ರ ಕವಿ | ೪. ಕವನ ಸಂಕಲನ |
| ೫. ಶ್ರೀರಾಮಾಯಣ ದರ್ಶನಂ | ೫. ಹಿಮ |
| | ೬. ಮಹಾಕಾವ್ಯ |

**ಆ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಭಾರತ ದೇಶವನ್ನು ಕವಿ ಯಾರಿಗೆ ಹೋಲಿಸಿದ್ದಾರೆ?

೨. ನಮ್ಮ ದೇಶದ ಸಿರಿಮುಡಿ ಯಾವುದು?

೩. ಗಂಗಾ ನದಿಗೆ ಕವಿ ಏನೆನ್ನುತ್ತಾರೆ?

೪. ಯಾವ ಬಿರುಕುಗಳನ್ನು ತೊರೆಯಬೇಕು?

೫. ಒಡಕು ಯಾವುದರಲ್ಲಿ ಬರಬಾರದು?

೬. ಕವಿ, ಜೀವನವನ್ನು ಯಾರಿಗೆ ಎರೆಯುವೆ ಎನ್ನುತ್ತಾರೆ?

**ಇ. ಈ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಭರತ ಭೂಮಿಯನ್ನು ಕವಿ ಹೇಗೆ ವರ್ಣಿಸಿದ್ದಾರೆ?

೨. ನಮ್ಮ ದೇಶದಲ್ಲಿ ಹರಿಯುವ ಪ್ರಮುಖ ನದಿಗಳಾವುವು?

೩. ನಾವು ಏನನ್ನು ತೊರೆಯಬೇಕು?

೪. ಭರತ ಭೂಮಿಗಾಗಿ ಕವಿ ಏನು ಮಾಡಬೇಕೆನ್ನುತ್ತಾರೆ?

## – ಭಾಷಾಭ್ಯಾಸ –

**ಅ. ಮಾದರಿಯಂತೆ ಪದಗಳನ್ನು ಬಿಡಿಸಿ ಬರೆಯಿರಿ:**

*ಮಾದರಿ : ಭೂಮಿಯಲ್ಲಿ = ಭೂಮಿ + ಅಲ್ಲಿ*

೧. ತಾಯಿಯಲ್ಲಿ =

೨. ಗುಡಿಯಲ್ಲಿ =

೩. ನದಿಯಲ್ಲಿ =

೪. ಶಾಲೆಯಲ್ಲಿ =

೫. ಮನೆಯಲ್ಲಿ =

೬. ಸಂಕಟದಲ್ಲಿ =

**ಆ. ಈ ಪದಗಳಲ್ಲಿ ಬಿಟ್ಟು ಹೋದ ಅಕ್ಷರಗಳನ್ನು ಆವರಣದಲ್ಲಿ ಕೊಟ್ಟಿರುವ ಅಕ್ಷರಗಳನ್ನು ಆಯ್ದು ಪದ ಪೂರ್ಣಗೊಳಿಸಿರಿ:**

*ಮಾದರಿ : ತೊಟ್ಟಿಲು*

೧. ಕಟ್ಟ____ ೨. ಮು____ಯ ೩. ಬಿ____ವೆ

೪. ____ಡಿಯ ೫. ತೊ____ವೆ ೬. ಮರೆ____

**[ವೆ, ರೆ, ಗು, ಲು, ಡಿ, ರಿ, ಸೆ]**

**ಇ. ಈ ಪದ್ಯ ಭಾಗವನ್ನು ಪೂರ್ಣಗೊಳಿಸಿರಿ:**

ಸಿಂಧು, ಯಮುನೆ ________________

________________________

________________________

________________________

________________ ಗುಡಿಯ ಕಟ್ಟಲು

## – ಚಟುವಟಿಕೆ –

**ಅ. ಈ ಪದ್ಯದ ನಾಲ್ಕನೆಯ ನುಡಿಯನ್ನು ಕಂಠಪಾಠ ಮಾಡಿರಿ**

- ಕುವೆಂಪುರವರ 'ಕನ್ನಡ ಎನೆ ಕುಣಿದಾಡುವುದೆನ್ನೆದೆ' ಪದ್ಯವನ್ನು ಸಾಮೂಹಿಕವಾಗಿ ರಾಗಬದ್ಧವಾಗಿ ಹಾಡಿರಿ.

- ಭಾರತದ ನಕಾಶೆಯಲ್ಲಿ ಈ ಪದ್ಯದಲ್ಲಿ ಬರುವ ನದಿಗಳನ್ನು ಗುರುತಿಸಿರಿ.
- **ಈ ಸೂಕ್ತಿ ಅರ್ಥ ಮಾಡಿಕೊಂಡು ೫-೬ ಸಾಲುಗಳನ್ನು ಬರೆಯಿರಿ:**

  ೧. ಜನನಿಜನ್ಮಭೂಮಿ, ಸ್ವರ್ಗಕ್ಕಿಂತಲು ಮಿಗಿಲು

  ೨. ದೇಶಸೇವೆಯೇ ಈಶಸೇವೆ

**ಆ. ರೂಢನಾಮ, ಅಂಕಿತ ನಾಮಗಳನ್ನು ಗುರುತಿಸಿ ಬರೆಯಿರಿ:**

***ಮಾದರಿ : ಭರತ = ಅಂಕಿತ ನಾಮ; ಭೂಮಿ – ರೂಢನಾಮ***

ಕೃಷ್ಣ, ಗುಡಿ, ಕಡಲು, ತುಂಗೆ, ಸಿಂಧು, ತಾಯಿ

**ಇ. ಬಹುವಚನ ರೂಪದಲ್ಲಿ ಬರೆಯಿರಿ:**

***ಮಾದರಿ : ಗಿರಿ = ಗಿರಿಗಳು***

ಗುಡಿ =

ಮತ =

ನದಿ =

ಮರ =

ತೊಟ್ಟಿಲು =

**ಈ. ಬಿಡಿಸಿ ಬರೆಯಿರಿ:**

***ಮಾದರಿ : ತೊಟ್ಟಿಲುಗಳನ್ನು = ತೊಟ್ಟಿಲುಗಳು + ಅನ್ನು***

ಬಿರುಕುಗಳನ್ನು =

ಒಡಕುಗಳನ್ನು =

ತೊಡಕುಗಳನ್ನು =

ಮತಗಳನ್ನು =

☆ ☆ ☆ ☆ ☆

# ೮. ನಾಮದ ಮಹಿಮೆ!! (ಗದ್ಯ)

– ಜನಪದ

ಒಂದೂರಿನಲ್ಲಿ ಒಬ್ಬ ಬಡವ. ಅವನಿಗೆ ದಾರಿದ್ರ್ಯ ದಿನದಿನಕ್ಕೆ ಹೆಚ್ಚಾಯಿತು. ಒಂದು ದಿನ ಆ ಊರಿಗೆ ಯಾರೊ ಹರಿಕಥೆ ಮಾಡಲು ಬಂದರು. ಬಡವ ಹರಿಕಥೆ ಕೇಳಿ ಬೆಳಗ್ಗೆ ದಾಸರ ಬಳಿಗೆ ಹೋದ.





“ಸ್ವಾಮಿ, ನನ್ನ ಬಡತನ ಹರಿಯಂಗೆ ಒಂದು ಉಪಾಯ ಹೇಳಿ” ಎಂದ. ಆಗ ದಾಸರು “ನೀನು ದಿನಕ್ಕೆ ಎಷ್ಟು ಬಾರಿ ದೇವರ ನೆನಿಯುತ್ತೀಯ?” ಅಂದರು.

“ಎಷ್ಟು ಸಾರಿಯೂ ಇಲ್ಲ ಸ್ವಾಮಿ” ಅಂದ ಬಡವ. “ಹಾಗಾದರೆ ಒಂದು ಕೆಲಸ ಮಾಡು. ದಿನಕ್ಕೊಂದು ಸಾರಿ ಹಣ್ಣು ಕಾಯಿ, ಗಂಧದ ಕಡ್ಡಿ, ಕರ್ಪೂರ ತಗೊಂಡು ನಿಮ್ಮೂರ ದೇವಸ್ಥಾನದಲ್ಲಿ ಪೂಜಾ ಮಾಡಿಸು” ಎಂದರು. ಆಗ ಬಡವ, “ಸ್ವಾಮಿ, ದಿನಕ್ಕೆ ಎಷ್ಟು ದುಡ್ಡಾಗ್ತದೆ? ಸುಲಭವಾದ ಕೆಲಸ ಹೇಳಿ” ಅಂದ. “ಹಾಗಾದರೆ ದಿವಸ ಹೋಗಿ ದೇವರ ಮುಖ ನೋಡಿಕೊಂಡು ಬಾ” ಎಂದರು ದಾಸರು. ಬಡವನಿಗೆ ಅದೂ ಕಷ್ಟವಾಗಿ ಕಂಡಿತು.

"ಏನೊ ಸ್ವಾಮಿ, ಆರು ಕಟ್ಟೋದು ಬಿಟ್ಟು ದಿನ ದೇವಸ್ಥಾನಕ್ಕೆ ಹೋಗ್ಲೇ! ಅದು ಸಾಧ್ಯವಿಲ್ಲ" ಅಂದ. ಆಗ ದಾಸರು "ಒಂದು ಕೆಲಸ ಮಾಡು. ನಿಮ್ಮೂರಲ್ಲಿ ಯಾರಾದರೂ ನಾಮ ಇಕ್ಕುವವರು ಇದ್ದಾರೆಯೇ?" ಎಂದರು.

"ಇದ್ದಾರೆ" ಎಂದ ಬಡವ.

"ಹಾಗಾದರೆ ದಿನ ಬೆಳಗ್ಗೆ ಅವನ ನಾಮ ನೋಡು" ಎಂದರು. "ನೋಡಿ ಸ್ವಾಮಿ, ಅದು ಬೇಕಾದರೆ ಮಾಡ್ತೀನಿ!" ಎಂದು ಬಡವ ಹಿಗ್ಗಿನಿಂದ ನುಡಿದ. "ನಮ್ಮ ಮನೆ ಎದುರಿಗೆ ಒಬ್ಬ ಕುಂಬಾರ ಮುದುಕ ಇದ್ದಾನೆ. ನಾನು ಬೆಳಗ್ಗೆ ಏಳುವ ಹೊತ್ತಿಗೆ ಅವನು ನಾಮ ಹಾಕ್ಕೊಂಡು ಬಾಗಿಲಲ್ಲಿ ಕುಳಿತಿರುತ್ತಾನೆ. ಅದು ಬೇಕಾದರೆ ಮಾಡ್ತೀನಿ" ಎಂದ.

ಬಡವ ಅಂದಿನಿಂದ ತಪ್ಪದೇ ಕುಂಬಾರರ ಮುದುಕನ ನಾಮ ನೋಡಿ ಹೋಗುತ್ತಿದ್ದ. ಹೀಗೆಯೇ ನಾಲ್ಕು, ಐದು ತಿಂಗಳು ಕಳೆದಿರಬಹುದು. ಒಂದು ದಿನ ಆ ಮುದುಕ ಮುಂಜಾನೆ ಬೇಗ ಎದ್ದು ಮಡಕೆ ಮಾಡಲು ಮಣ್ಣು ತರುವುದಕ್ಕಾಗಿ ಕೆರೆಗೆ ಹೋದ. ಎಂದಿನಂತೆ ಎದ್ದು ಬಡವ ಅಜ್ಜನನ್ನು ಕಾಣದೆ ನಿರಾಶನಾದ. "ಅಜ್ಜೋ" ಎಂದು ಅವರ ಮನೆಗೆ ಹೋಗಿ ಕೂಗಿದ. ಅಜ್ಜ ಕಾಣಲಿಲ್ಲ. ಕೆರೆಗೆ ಹೋದ ವಿಷಯವನ್ನು ತಿಳಿದುಕೊಂಡ. ಬಡವ ನಿಯಮ ತಪ್ಪದಂತೆ ನಾಮವನ್ನು ನೋಡಲು ಕೆರೆಯ ಕಡೆಗೆ ಹೋದ.



ಕೆರೆಯಲ್ಲಿ ಅಜ್ಜ ಮಣ್ಣನ್ನು ಅಗೆಯುತ್ತಿದ್ದ. ಅವನಿಗೆ ಮೂರು ಬಿಂದಿಗೆ ಹಣ ಸಿಕ್ಕಿತು. ಮುದುಕ ತನ್ನ ಮಗನಿಗೆ "ಮಗ! ಮೇಲಕ್ಕೆ ಎತ್ತೋ ಇಷ್ಟು ಹೊತ್ತಿನಾಗೆ ಯಾರು ಬರ್ತಾರೆ" ಎಂದ. ಮಗ ಬಿಂದಿಗೆಯನ್ನು ಎತ್ತಲು ಪ್ರಯತ್ನಿಸಿದ. ಅದೇ ವೇಳೆಗೆ ಏರಿಯನ್ನು ಹತ್ತಿ ಬಡವನೂ ಅಲ್ಲಿಗೆ ಬಂದ. ಅಜ್ಜನಿಗೆ ಹಣ ಸಿಕ್ಕಿರುವುದು ಅವನಿಗೆ ಗೊತ್ತಿರಲಿಲ್ಲ. ನಾಮವನ್ನು ನೋಡುವುದಕ್ಕಾಗಿ ಬಂದವನು ಅಜ್ಜನನ್ನು ಕಂಡ ಕೂಡಲೇ ಸಂತೋಷವಾಯಿತು. ಕೊನೆಗೂ ನಾಮವನ್ನು ನೋಡಿದೆನಲ್ಲಾ ಎನ್ನುವ ಭರದಲ್ಲಿ "ನೋಡಿದೆ!" ಎಂದು ಜೋರಾಗಿ ಕೂಗಿದ. ಅಜ್ಜ, ಅಜ್ಜನ ಮಗ ಇಬ್ಬರೂ ಬೆಚ್ಚಿದರು. ತಮ್ಮ ಗುಟ್ಟು ಬಯಲಾಯಿತು ಎಂದು ಬೆದರಿ, "ಸ್ವಲ್ಪ ಬಾರಪ್ಪ ಇಲ್ಲಿ ನಿನಗೊಂದು ಮಾತನ್ನು ಹೇಳ್ತಿನಿ!" ಎಂದು ಅಜ್ಜ ಕೂಗಿದ. "ಇಲ್ಲ, ಇಲ್ಲ, ಬಿಡಯ್ಯ, ಮೂರನ್ನು ನೋಡಿಕೊಂಡೆ" ಎಂದು ಬಡವ ನಿಂತಲ್ಲಿಂದಲೇ ಉತ್ತರಿಸಿದ. ಅಜ್ಜನಿಗೆ ಇನ್ನೂ ಭಯವಾಯಿತು! ಬಡವನ ಬಳಿಗೆ ಓಡಿ ಹೋಗಿ "ಯಾರಿಗೂ ಹೇಳಬೇಡ, ನಿನಗೂ ಅರ್ಧ ಕೊಡುತ್ತೇವೆ" ಎಂದು ಬೇಡಿದ. ಬಡವನಿಗೆ ಅರ್ಥವಾಗಲಿಲ್ಲ. ಕೊನೆಗೆ ಅರ್ಧ ಹಣ ಸಿಕ್ಕಿದ ಮೇಲೆ "ಎಲ್ಲ ನಾಮದ ಮಹಿಮೆ!" ಎಂದುಕೊಂಡ. ಅಷ್ಟು ಹಣವನ್ನು ಮನೆಗೆ ತಂದು ಹೆಂಡತಿಗೆ ಕೊಟ್ಟ. ಸಿಕ್ಕ ಹಣದಲ್ಲಿ ಅವರು ಅನುಕೂಲವಾಗಿ ಬಾಳಿಕೊಂಡು ಹೋದರು.

## ಕೃತಿ–ಕರ್ತೃ ಪರಿಚಯ

ಜನಪದ ಕತೆಗಳು ಜನಪದ ಸಾಹಿತ್ಯದ ಒಂದು ಪ್ರಮುಖ ಪ್ರಕಾರ. ಗ್ರಾಮೀಣ ಪ್ರದೇಶದ ಅನಕ್ಷರಸ್ಥ ಸಮುದಾಯದಿಂದ ಸೃಷ್ಟಿಯಾದವು. ನಿರ್ದಿಷ್ಟವಾಗಿ ಇಂಥವರೇ ರಚಿಸಿದರೆಂದು ಹೇಳಲಾಗದೆ ಬಾಯಿಂದ ಬಾಯಿಗೆ ಹರಿದು ಬಂದಿವೆ. ಒಂದು ವಿಶಿಷ್ಟ ಕಲ್ಪನೆಯನ್ನಾಧರಿಸಿ ರಚಿತವಾಗಿರುವ ಕತೆಗಳಲ್ಲಿ ಮನರಂಜನೆಯೊಂದಿಗೆ ನೀತಿ ಮತ್ತು ವಿವೇಕದ ಮಾತುಗಳೂ ಅಂತರ್ಗತವಾಗಿರುತ್ತವೆ. ಶ್ರೀ ಸಾಮಾನ್ಯರ ಜೀವನಾನುಭವಗಳು ಹಾಸುಹೊಕ್ಕಾಗಿರುತ್ತವೆ.

'ನಾಮದ ಮಹಿಮೆ' ಜನಪದ ಕತೆಯನ್ನು ಡಾ॥ ಜೀ.ಶಂ. ಪರಮಶಿವಯ್ಯ ಅವರು ಸಂಪಾದಿಸಿರುವ 'ಕನ್ನಡ ಜಾನಪದ ಕಥೆಗಳು' ಎಂಬ ಸಂಕಲನದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.



### – ಓದಿ ತಿಳಿಯಿರಿ –

| | | | | | |
|---|---|---|---|---|---|
| ದಾರಿದ್ರ್ಯ | – | ಬಡತನ, | ನೆನೆ | – | ಧ್ಯಾನಿಸು, ಸ್ಮರಿಸು, ಪ್ರಾರ್ಥಿಸು, ಒದ್ದೆ |
| ಇಕ್ಕು | – | ಧರಿಸು, ಇಟ್ಟುಕೊಳ್ಳು | ಹಿಗ್ಗು | – | ಸಂತೋಷ, ಸಂಭ್ರಮ, ವಿಕಾಸ, ಸಡಗರ |
| ಮುಂಜಾನೆ | – | ಬೆಳಗಿನ ಜಾವ | ನಿಯಮ | – | ಕ್ರಮ, ಬದ್ಧತೆ |
| ಭರ | – | ರಭಸ | ಬೆಚ್ಚು | – | ಹೆದರು, ಭಯ, ಕಳವಳ, ಆತಂಕ |
| ಗುಟ್ಟು | – | ರಹಸ್ಯ | ಮಹಿಮೆ | – | ಮಹತ್ವ, ಪ್ರಭಾವ |
| ಹರಿ | – | ವಿಷ್ಣು, ಚೂರುಮಾಡು | ನೀಗು | – | ಹೋಗಲಾಡಿಸು |

## – ಗಮನಿಸಿರಿ –

ಹರಿಕಥೆ – ವಿಷ್ಣುವಿನ ಸಾಹಸ, ಸಾಧನೆ, ಮಹಿಮೆಯನ್ನು ವರ್ಣಿಸುವ ಕಾವ್ಯರೂಪದ ಕಥನ

ಆರುಕಟ್ಟು – ಉಳುಮೆಗೆ ಸಿದ್ಧತೆ ಮಾಡಿಕೊಂಡು ಎತ್ತುಗಳನ್ನು ನೇಗಿಲಿಗೆ ಕಟ್ಟಿ ಬೇಸಾಯ ಮಾಡುವುದು

ಕುಂಬಾರ – ಮಣ್ಣಿನಿಂದ ಮಡಕೆ ವಸ್ತುಗಳನ್ನು ತಯಾರಿಸುವವನು.

ಗುಟ್ಟು ಬಯಲಾಗು – ರಹಸ್ಯವಾದ ವಿಚಾರ ಹೊರಬೀಳುವುದು.

## – ಅಭ್ಯಾಸ –

**ಅ. ಸಂಬಂಧಿಸಿರದ ಪದವನ್ನು ಗುಂಪಿನಿಂದ ಆಯ್ದು ಬರೆಯಿರಿ:**

೧. ಶ್ರೀಮಂತ, ಬಲ್ಲಿದ, ಹಣವಂತ, ಬಡವ

೨. ಹಣ್ಣುಕಾಯಿ, ಕರ್ಪೂರ, ಭವನ, ಗಂಧದ ಕಡ್ಡಿ

೩. ಕುಂಬಾರ, ಕಮ್ಮಾರ, ಬಡಗಿ, ಆಟಗಾರ

೪. ಏರಿಯನ್ನು, ಊರನ್ನು, ಮಡಿಕೆಯನ್ನು, ನಾಮವನ್ನು

೫. ಹೆದರು, ಭಯಗೊಳ್ಳು, ಕಳವಳಪಡು, ಹಿಗ್ಗು

**ಆ. ವಿರುದ್ಧಾರ್ಥಕ ಪದಗಳನ್ನು ಬರೆಯಿರಿ:**

ನಿರಾಸೆ, ಭಯ, ಏರು, ಬಡವ, ಒಳಗೆ

**ಇ. ಈ ಪದಗಳ ಗ್ರಾಂಥಿಕ ರೂಪ ಬರೆಯಿರಿ:**

ಹರಿಯಂಗೆ, ದುಡ್ಡಾಗ್ತದೆ, ಬರ್‍ತಾರೆ, ಹೇಳ್ತಿನಿ, ಹೋಗ್ಲಿ

**ಈ. ಸಮಾನಾರ್ಥಕ ಪದಗಳನ್ನು ಬರೆಯಿರಿ:**

ಹರಿ, ನೆನೆ, ಮುಖ, ಬೆಚ್ಚು, ಮಹಿಮೆ, ಹಿಗ್ಗು

**ಉ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಬಡವ ಹರಿಕಥೆದಾಸರನ್ನು ಏನೆಂದು ಕೇಳಿದ?

೨. ಪ್ರತಿನಿತ್ಯ ದೇವಾಲಯಕ್ಕೆ ಹೋಗುವುದು ಕಷ್ಟವಾಗಿ ಕಂಡದ್ದು ಏಕೆ?

೩. ಕುಂಬಾರ ಮುದುಕ ಕೆರೆಯ ಕಡೆ ಹೋಗಲು ಕಾರಣವೇನು?

೪. ಕೆರೆ ಏರಿಯನ್ನು ಏರಿದ ಬಡವ ಏನನ್ನು ಕಂಡನು?

೫. ಅಜ್ಜ ಮತ್ತು ಅಜ್ಜನ ಮಗ ಬೆಚ್ಚಿದ್ದು ಏಕೆ?

೬. ಮುದುಕನ ಯಾವ ಮಾತು ಬಡವನಿಗೆ ಅರ್ಥವಾಗಲಿಲ್ಲ?

**ಊ. ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಬಡವನ ದಾರಿದ್ರ್ಯವನ್ನು ಹೋಗಲಾಡಿಸಿಕೊಳ್ಳಲು ದಾಸರು ಸೂಚಿಸಿದ ಉಪಾಯಗಳಾವುವು?

೨. ಬಡವ ರೂಢಿಸಿಕೊಂಡ ನಿಯಮ ತಪ್ಪಿದ್ದು ಏಕೆ?

೩. ಬಡವನ ಬಳಿಗೆ ಓಡಿ ಹೋಗಿ ನಿನಗೂ ಅರ್ಧ ಹಣ ಕೊಡುತ್ತೇನೆ ಎಂದು ಹೇಳಲು ಕಾರಣವೇನು?

೪. ಬಡವನ ದರಿದ್ರ ಹೇಗೆ ಹರಿಯಿತು?

೫. ನಾಮದ ಮಹಿಮೆಯ ಕತೆ ವಿಶೇಷತೆ ಏನು?

**ಋ. ಈ ಮಾತುಗಳನ್ನು ಯಾರು, ಯಾರಿಗೆ, ಯಾವಾಗ ಹೇಳಿದರು, ತಿಳಿಸಿರಿ:**

೧. "ಸ್ವಾಮಿ ನನ್ನ ಬಡತನ ಹರಿಯಂಗೆ ಒಂದು ಉಪಾಯ ಹೇಳಿ".

೨. "ನಿಮ್ಮೂರಲ್ಲಿ ಯಾರಾದರೂ ನಾಮ ಇಕ್ಕುವವರು ಇದ್ದಾರೆಯೆ"?

೩. "ಮೇಲಕ್ಕೆ ಎತ್ತೋ ಇಷ್ಟು ಹೊತ್ತಿನಾಗೆ ಯಾರು ಬರ್‍ತಾರೆ"?

೪. "ಇಲ್ಲಿ ಬಾರಪ್ಪ ಇಲ್ಲಿ ನಿನಗೊಂದು ಮಾತನ್ನು ಹೇಳ್ತಿನಿ".



## – ಭಾಷಾಭ್ಯಾಸ –

**ಅ. ಅಭ್ಯಾಸ ಚಟುವಟಿಕೆ**

೧. ನಾಮದ ಮಹಿಮೆ ಕಥೆಯನ್ನು ವಿವಿಧ ಪಾತ್ರಗಳ ಮೂಲಕ ಸಂಭಾಷಣೆ ರೂಪದಲ್ಲಿ ಅಭಿನಯಿಸಿರಿ.

೨. 'ಕನ್ನಡ ಜಾನಪದ ಕಥೆಗಳು' ಸಂಕಲನದಲ್ಲಿನ ಇತರ ಕಥೆಗಳನ್ನು ಓದಿರಿ.

೩. ಜನಪದ ಕಥೆಗಳ ಸ್ವರೂಪ, ವೈಶಿಷ್ಟ್ಯವನ್ನು ಅಧ್ಯಾಪಕರಿಂದ ತಿಳಿಯಿರಿ.

**ಆ. ಬಹುವಚನ ರೂಪ ಬರೆಯಿರಿ:**

ಬಡವ, ಬಾಗಿಲು, ಅಜ್ಜ, ಮಗು

ಇ. **ಈ ಗುಂಪಿನಲ್ಲಿ ಸಜಾತೀಯ, ವಿಜಾತೀಯ ಒತ್ತಕ್ಷರಗಳುಳ್ಳ ಪದಗಳನ್ನು ಪ್ರತ್ಯೇಕಿಸಿ ಬರೆಯಿರಿ:**

ಎಷ್ಟು, ನಮ್ಮೂರು, ಸಾಧ್ಯ, ನಾಲ್ಕು, ಅಜ್ಜ, ಎದ್ದು, ಹೊತ್ತು, ಇಬ್ಬರು, ಹೇಳ್ತಿನಿ, ತಮ್ಮ, ಗುಟ್ಟು, ಪದ್ಯ

ಈ. **ಬಿಡಿಸಿ ಬರೆಯಿರಿ:**

ಹೆಚ್ಚಾಯಿತು, ಕರ್ಪೂರವನ್ನು, ಬೇಕಾದರೆ, ಐದಾರು, ತಪ್ಪದಂತೆ, ಗೊತ್ತಿರಲಿಲ್ಲ, ನಿನಗೊಂದು

ಉ. **ಈ ಪದಗಳ ರಚನೆಯನ್ನು ಗಮನಿಸಿ ಮಾದರಿಯಂತೆ ವಿಂಗಡಿಸಿ ಬರೆಯಿರಿ:**

***ಮಾದರಿ : ಉಪಾಯ = ಉ ಪ್+ಆ ಯ್+ಅ***

***ಸಾಧ್ಯವಿಲ್ಲ = ಸ್+ಆ ಧ್+ಯ್+ಅ ವ್+ಇ ಲ್+ಲ್+ಅ***

ಬೆಚ್ಚಿದರು, ಕಾಣಲಿಲ್ಲ, ಅರ್ಥವಾಗಲಿಲ್ಲ, ಮಡಿಕೆ, ಸೊಗಸು

ಊ. **ಈ ಪದಗಳ ರಚನೆಯನ್ನು ಗಮನಿಸಿ:**

ಮನೆಯನ್ನು, ಕೆರೆಯಿಂದ, ಮರಕ್ಕೆ, ಅಣ್ಣನಿಗೆ, ಅರಸನ, ರಾಣಿಯಲ್ಲಿ

ಮನೆ+ಅನ್ನು, ಕೆರೆ+ಇಂದ, ಮರ+ಕೆ, ಅಣ್ಣ+ಇಗೆ, ಅರಸ+ಅ ರಾಣಿ+ಅಲ್ಲಿ

ನಾಮ ಪ್ರಕೃತಿಗಳಿಗೆ ಬೇರೆ ಬೇರೆ ಅರ್ಥವನ್ನುಂಟು ಮಾಡುವ ಆದರೆ ಸ್ವತಂತ್ರ ಅರ್ಥವಿರದ ವಿಭಕ್ತಿ ಪ್ರತ್ಯಯಗಳು ಸೇರಿದಾಗ ಉಂಟಾಗುವ ರಚನೆಯೇ ನಾಮಪದ. ಕನ್ನಡದಲ್ಲಿ ಉ, ಅನ್ನು, ಇಂದ, ಇಗೆ (ಕ್ಕೆ), ಅ, ಅಲ್ಲಿ ಎಂಬ ಏಳು ವಿಭಕ್ತಿ ಪ್ರತ್ಯಯಗಳು ರೂಢಿಯಲ್ಲಿವೆ.

| **ವಿಭಕ್ತಿ** | **ನಾಮಪ್ರಕೃತಿ** | **ವಿಭಕ್ತಿ ಪ್ರತ್ಯಯ** | **ನಾಮಪದ** |
|---|---|---|---|
| ಪ್ರಥಮ | ಮುದುಕ | ಉ | ಮುದುಕನು |
| ದ್ವಿತೀಯ | ಮುದುಕ | ಅನ್ನು | ಮುದುಕನನ್ನು |
| ತೃತೀಯ | ಮುದುಕ | ಇಂದ | ಮುದುಕನಿಂದ |
| ಚತುರ್ಥೀ | ಮುದುಕ | ಇಗೆ (ಕ್ಕೆ) | ಮುದುಕನಿಗೆ |
| ಪಂಚಮಿ | ಮುದುಕ | ದೆಸೆಯಿಂದ | ಮುದುಕನ ದೆಸೆಯಿಂದ |
| ಷಷ್ಠಿ | ಮುದುಕ | ಅ | ಮುದುಕನ |
| ಸಪ್ತಮೀ | ಮುದುಕ | ಅಲ್ಲಿ | ಮುದುಕನಲ್ಲಿ |

**ಋ. ಈ ವಾಕ್ಯಗಳಲ್ಲಿರುವ ವಿಭಕ್ತಿ ಪ್ರತ್ಯಯಗಳನ್ನು ಗುರುತಿಸಿರಿ:**

೧. ರಮೇಶನು ಶಾಲೆಯಿಂದ ಬಂದನು.

೨. ದಾಸರು ಹರಿಕಥೆ ಮಾಡಿದರು.

೩. ನಿನಗೊಂದು ಮಾತನ್ನು ಹೇಳ್ತಿನಿ.

೪. ಮುದುಕನ ಹಣೆಯಲ್ಲಿ ನಾಮವಿದ್ದಿತು.

**ಎ. ಈ ವಾಕ್ಯಗಳನ್ನು ಗಮನಿಸಿ, ಕಾಲಸೂಚಕವನ್ನು ಗುರುತಿಸಿರಿ:**

೧. ಸಿಂಚನ ಶಾಲೆಗೆ ಹೋದಳು.

೨. ರಮೇಶನು ಮರವನ್ನು ಕಡಿದನು.

೩. ಜನರು ಉತ್ಸವದಲ್ಲಿ ಭಾಗಿಯಾದರು.

ಹೋದಳು, ಕಡಿದನು, ಭಾಗಿಯಾದರು ಪದಗಳು ಕೆಲಸವನ್ನು ಸೂಚಿಸುತ್ತವೆ. ಇವೇ ಕ್ರಿಯಾಪದಗಳು. ಕ್ರಿಯಾಪದದ ಮೂಲ ರೂಪವೇ ಧಾತು.

**ಉದಾ :–** ಹೋಗು, ಕಡಿ, ಭಾಗಿ

ಕೆಲಸವು ಯಾವ ಸಂದರ್ಭದಲ್ಲಿ ನಡೆದಿದೆ ಎಂದು ಸೂಚಿಸುವ ವಿಶೇಷಣಗಳೇ ಕಾಲರೂಪಗಳು. ಈಗಾಗಲೇ ಕ್ರಿಯೆ ನಡೆದಿರುವುದು ಭೂತಕಾಲ, ಪ್ರಸ್ತುತ ಕ್ರಿಯೆ ನಡೆಯುತ್ತಿದೆ ಎಂದು ಸೂಚಿಸುವುದು ವರ್ತಮಾನ ಕಾಲ, ಮುಂದೆ ನಡೆಯಬಹುದಾದ ಕ್ರಿಯೆಯ ಸೂಚಕವೇ ಭವಿಷ್ಯತ್ ಕಾಲ.

ಧಾತುವಿಗೆ ದ, ಉವ, ಉತ್ತ ಎಂಬ ಪ್ರತ್ಯಯಗಳು ಸೇರಿದಾಗ ಭೂತ, ವರ್ತಮಾನ, ಭವಿಷ್ಯತ್ ಕಾಲರೂಪಗಳು ಸೂಚಿತವಾಗುತ್ತವೆ.

ಜನರು ಊರಿಗೆ ಹೋದರು (ಭೂತಕಾಲ) ದ

ಗೆಳೆಯರು ಪಾಠ ಬರೆಯುತ್ತಿದ್ದಾರೆ (ವರ್ತಮಾನ ಕಾಲ) ಉತ್ತ

ವಿದ್ಯಾರ್ಥಿಗಳು ನಾಳೆ ಬರುವರು (ಭವಿಷ್ಯತ್ ಕಾಲ) ವ

ಈ ವಾಕ್ಯಗಳಲ್ಲಿ ಕ್ರಮವಾಗಿ ದ, ಉತ್ತ, ವ ಪ್ರತ್ಯಯಗಳು ಬಳಕೆಯಾಗಿದ್ದು, ಕಾಲ ರೂಪಗಳಲ್ಲಿ ವ್ಯತ್ಯಾಸವಾಗಿದೆ.

**ಏ. ಈ ವಾಕ್ಯಗಳ ಕಾಲರೂಪಗಳನ್ನು ಗುರುತಿಸಿ ಬರೆಯಿರಿ:**

೧. ಸಂಜೆ ವೇಳೆಗೆ ರಾಜರು ಬರುವರು.

೨. ಸ್ವರೂಪನು ಬೆಂಗಳೂರಿಗೆ ಹೋದನು.

೩. ಸರೋಜ ಉಕ್ತಲೇಖನ ಬರೆಯುತ್ತಿದ್ದಾಳೆ.

**– ಚಟುವಟಿಕೆ –**

ಅ. **ಜೀ.ಶಂ ಪರಮಶಿವಯ್ಯ ಅವರ ಸಂಪಾದಕತ್ವದ ಕನ್ನಡ ಜಾನಪದ ಕಥೆಗಳು ಪುಸ್ತಕವನ್ನು ಕಳುಹಿಸಿ ಕೊಡುವಂತೆ ಮೈಸೂರಿನ ಗೀತಾ ಬುಕ್ ಹೌಸ್ ಮಾಲೀಕರಿಗೆ ಒಂದು ಮನವಿ ಪತ್ರ ಬರೆಯಿರಿ.**

ಆ. **ಜನಪದ ತ್ರಿಪದಿಗಳ ಭಾವಾರ್ಥವನ್ನು ಬರೆಯಿರಿ:**

ಏಳುತಾಲೇ ಎದ್ದು ಯಾರ‍್ಯಾರ ನೆನೆಯಾಲಿ
ಎಳ್ಳುಜೀರಿಗೆ ಬೆಳೆಯೋಳ ಭೂಮಿತಾಯ
ಎದ್ದೊಂದು ಗಳಿಗೆ ನೆನದೇನು

ಯಾರು ಆದರೂ ಹೆತ್ತ ತಾಯಂತೆ ಆದಾರೋ
ಸಾವಿರ ಸೌದೆ ಒಲೆಯಲ್ಲಿ ಉರಿದಾರೂ
ದೀವಿಗೆಯಂತ ಬೆಳಕುಂಟೆ

ಇ. **ನೀವು ಕೇಳಿರುವ ಒಂದು ಜನಪದ ಕಥೆಯನ್ನು ಬರೆಯಿರಿ:**

**ಪೂರಕ ಅಧ್ಯಯನ**

- ಜನಪದ ಕಥೆಗಳ ಸಂಕಲನವನ್ನು ಸಂಗ್ರಹಿಸಿ ಓದಿ.
- ಜನಪದ ಸಾಹಿತ್ಯದ ಇತರ ಪ್ರಕಾರಗಳ ಬಗೆಗೆ ಮಾಹಿತಿ ಸಂಗ್ರಹಿಸಿ.
- ಡಾ॥ ರಾಗೌ ಅವರ ಜನಪದ ಸಾಹಿತ್ಯ ರೂಪಗಳು ಕೃತಿಯನ್ನು ಓದಿ.

☆ ☆ ☆ ☆ ☆

# ೯. ತೂಗಿ ತೂಗಿ ಮರಗಳೇ (ಪದ್ಯ)

– ಡಾ|| ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ



ತೂಗಿ ತೂಗಿ ಮರಗಳೇ
ಇಳೆಗೆ ಇಳಿದ ವರಗಳೇ,
ನೆಲದ ಮಧುರ ಗಾನದಲ್ಲಿ
ಮೂಡಿ ಬಂದ ಸ್ವರಗಳೇ.

ಮಾತಾಡದೇ ದುಡಿಯುವಾ ಪ್ರೀತಿ ಪಡೆದ ಕರಗಳೇ
ಸೋತು ಬಂದ ಹಕ್ಕಿ ಹಿಂಡು ತೂಗಿಕೊಳುವ ನೆಲೆಗಳೇ
ಸಾಲು ಹಸಿರ ಮಾಲೆಯೇ
ಜೀವರಸದ ನಾಲೆಯೇ
ಪ್ರೀತಿಯೆಂಬ ನೀತಿ ಹಾಡಿ ಪ್ರಕೃತಿ ಬರೆದ ಓಲೆಯೇ !

ಮಣ್ಣಿನ ತಮದಾಳವ ಸೀಳಿ ಮೇಲೆ ಬರುವಿರಿ
ಮೈ ತುಂಬ ಚಿಗುರಿನ ರೋಮಾಂಚನ ತಳೆವಿರಿ;
ಕೊಂಬೆ ಕೊಂಬೆ ಕೈಯ ಚಾಚಿ ಬನ್ನಿ ಎಂದು ಕರೆವಿರಿ
ಔದಾರ್ಯದ ಒಡಲಾಗಿ ಹೂವು ಹಣ್ಣು ಸುರಿವಿರಿ.

ಆಕಾಶಕೆ ತುಡಿಯುವಾ ನೆಲದಾಳದ ಕನಸೇ
ನೀಡಲೆಂದೆ ಫಲಿಸುವಾ ಋಷಿಸಮಾನ ಮನಸೇ;
ಕಡಿದರೂ ಕರುಣೆ ತೋರಿ ಚಿಗುರುವಾ ಗೆಲುವೇ
ಸತ್ಯ ತ್ಯಾಗ ಅಹಿಂಸೆಯೇ ನಿತ್ಯವಾದ ನಿಲುವೇ !

## ಕೃತಿ–ಕರ್ತೃ ಪರಿಚಯ



'ನೈಶಿಲ ಭಟ್ಟ' ಎಂಬ ಕಾವ್ಯ ನಾಮವುಳ್ಳ ಡಾ॥ ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ ಅವರು (ಜನನ ೧೯೩೬) ಶಿವಮೊಗ್ಗದವರು ಇವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನುರಚಿಸಿ ಜನಪ್ರಿಯರಾಗಿರುವ ಅವರ 'ನಿನ್ನೆಗೆ ನನ್ನ ಹಾಡು, ವೃತ್ತ, ಸುಳಿ, ಹೊಳೆ ಸಾಲಿನ ಮರ, ಬಾರೋ ವಸಂತ, ಭಾವಸಂಗಮ, ದೀಪಿಕಾ' ಕವಿತಾ ಸಂಕಲನಗಳು ಮುಖ್ಯವಾಗಿವೆ. ಇವರ 'ಹೊರಳು ದಾರಿಯಲ್ಲಿ, ಕಾವ್ಯ ನಂದನ, ಚಿನ್ನದ ಹಕ್ಕಿ' ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ. ಅಲ್ಲದೆ ಕಾರಂತ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಆರ್ಯಭಟ ಪ್ರಶಸ್ತಿಗಳು ಬಂದಿವೆ. ಈ ಕವನವನ್ನು ಅವರ 'ಸಮಗ್ರ ಕಾವ್ಯ ಸಂಪುಟ–೨' ಸಂಕಲನದಿಂದ ಆರಿಸಲಾಗಿದೆ.

### – ಓದಿ ತಿಳಿಯಿರಿ –

| | | | |
|---|---|---|---|
| ಇಳೆ | – ಭೂಮಿ, ಧರೆ, ಬುವಿ | ಮಧುರ | – ಇಂಪಾದ |
| ಕರ | – ಕೈ | ನೆಲೆ | – ಆಶ್ರಯ |
| ಓಲೆ | – ಪತ್ರ | ಔದಾರ್ಯ | – ಉದಾರತೆ, ಧಾರಾಳ ಗುಣ |
| ತಮ | – ಕತ್ತಲೆ (ಭೂಮಿಯ ಒಳಗೂ) | ಕರುಣೆ | – ದಯೆ |

### – ಈ ಸಾಲುಗಳಲ್ಲಿ ಬಂದಿರುವ ವಿಶೇಷಾರ್ಥಗಳನ್ನು ಗಮನಿಸಿರಿ –

ಇಳೆಗೆ ಇಳಿದ ವರಗಳೇ
ಸಾಲು ಹಸಿರ ಮಾಲೆಯೇ
ಜೀವರಸದ ನಾಲೆಯೇ
ಪ್ರಕೃತಿ ಬರೆದ ಓಲೆಯೇ
ಔದಾರ್ಯದ ಒಡಲಾಗಿ
ನೆಲದಾಳದ ಕನಸೇ
ಋಷಿಸಮಾನ ಮನಸೇ

## – ಅಭ್ಯಾಸ –

**ಅ. ಹೊಂದಿಸಿ ಬರೆಯಿರಿ:**

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ೧. ನೆಲದ ಮಧುರ | ೧) ಚಿಗುರಿನ | ........................... |
| ೨. ಪ್ರೀತಿ ಪಡೆದ | ೨) ಹಕ್ಕಿ ಹಿಂಡು | ........................... |
| ೩. ಸೋತು ಬಂದ | ೩) ತಮದಾಳ | ........................... |
| ೪. ಮಣ್ಣಿನ | ೪) ಕರಗಳೇ | ........................... |
| ೫. ಮೈ ತುಂಬ | ೫) ಗಾನದಲ್ಲಿ | ........................... |
| | ೬) ಸ್ವರಗಳೇ | ........................... |
| | ೭) ವರಗಳೇ | ........................... |

**ಆ. ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿಸಿ ಬರೆಯಿರಿ:**

೧. ಸಾಲು __________ ಮಾಲೆಯೇ

೨. ಜೀವ ರಸದ __________

೩. ಪ್ರಕೃತಿ ಬರೆದ __________

೪. ನೆರಳ ಕೊಡೆಯ __________

೫. ಕರುಣೆ ತೋರಿ __________

**ಇ. ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದವನ್ನು ಬರೆಯಿರಿ:**

೧. ಸಾಲು ಹಸಿರ : ಮಾಲೆ :: ಜೀವರಸದ : __________

೨. ಮಣ್ಣಿನ : ತಮದಾಳ :: ಮೈತುಂಬ : __________

೩. ಪ್ರೀತಿ ಪಡೆದ : ಕರಗಳು :: ಸೋತು ಬಂದ : __________

**ಈ. ಕೆಳಗಿನ ಸಾಲುಗಳಲ್ಲಿರುವ ಪ್ರಾಸ ಪದಗಳನ್ನು ಗುರುತಿಸಿ ಬರೆಯಿರಿ:**

*(ಪ್ರಾಸ = ಉಚ್ಚಾರ ಸಾಮ್ಯವಿರುವ ಪದಗಳು. ಇವು ಸಾಧಾರಣವಾಗಿ ಸಾಲಿನ ಮೊದಲು ಅಥವಾ ಕೊನೆಯಲ್ಲಿ ಬರುವುವು.)*

ಇಳೆಗೆ ಇಳಿದ ವರಗಳೇ

ಮೂಡಿ ಬಂದ ಸ್ವರಗಳೇ

ಪ್ರೀತಿ ಪಡೆದ ಕರಗಳೇ

ಸೀಳಿ ಮೇಲೆ ಬರುವಿರಿ

ರೋಮಾಂಚನ ತಳೆವಿರಿ

**ಉ. ಈ ಜೋಡುಪದಗಳನ್ನು ಗಮನಿಸಿ ಅಂತಹ ಪದಗಳನ್ನು ಸಂಗ್ರಹಿಸಿ ಬರೆಯಿರಿ:**

ಹೂವು-ಹಣ್ಣು, ಸತ್ಯ-ತ್ಯಾಗ, ಕಷ್ಟ-ನಷ್ಟ

**ಊ. ಈ ಪದಗಳ ತದ್ಭವ ರೂಪಗಳನ್ನು ಬರೆಯಿರಿ:**

ಋಷಿ, ಆಕಾಶ, ನಿತ್ಯ, ಪಕ್ಷಿ, ಸ್ವರ

**ಋ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ:**

೧. ಇಳೆಗೆ ಇಳಿದ ವರಗಳು ಯಾರು?

೨. ಮರಗಳು ಯಾರಿಗೆ ನೆಲೆ ನೀಡಿವೆ?

೩. ಪ್ರೀತಿ ಪಡೆದ ಕರಗಳು ಏನನ್ನು ಮಾಡುತ್ತವೆ?

೪. ಪ್ರಕೃತಿ ಬರೆದ ಓಲೆಯ ಸಾರವೇನು?

೫. ಮರಗಳು ಔದಾರ್ಯದ ರೂಪದಲ್ಲಿ ನಮಗೇನು ನೀಡುತ್ತವೆ?

೬. ನಿತ್ಯ ಎನಿಸುವ ನಿಲುವಾವುದು?

**ಎ. ಈ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ:**

೧. ಮರಗಳು ಹೇಗೆ ರೋಮಾಂಚನ ಹೊಂದುತ್ತವೆ?

೨. ಮರಗಳು ಔದಾರ್ಯದ ಒಡಲು ಹೇಗೆ?

೩. ನಾವು ಮರಗಳನ್ನು ಕಡಿದರೂ ಅವು ನಮಗೇನು ಮಾಡಿವೆ?

ಏ. **ಈ ಮಾತುಗಳನ್ನು ಯಾರು, ಯಾರಿಗೆ, ಯಾವಾಗ ಹೇಳಿದರು, ತಿಳಿಸಿರಿ:**

೧. 'ಪ್ರಕೃತಿ ಬರೆದ ಓಲೆಯೇ'

೨. 'ಹೂವು ಹಣ್ಣು ಸುರಿವಿರಿ'

೩. 'ನೆಲದಾಳದ ಕನಸೆ'

೪. 'ಸತ್ಯ, ತ್ಯಾಗ ಅಹಿಂಸೆಯೇ ನಿತ್ಯವಾದ ನಿಲುವೇ'

## – ಭಾಷಾಭ್ಯಾಸ –

ಅ. **ಈ ಪದಗಳನ್ನು ಓದಿ ಅವುಗಳಲ್ಲಿರುವ ವಿಭಕ್ತಿ ಪ್ರತ್ಯಯಗಳನ್ನು ಗುರುತಿಸಿರಿ:**

ಮನೆಯನ್ನು, ಶಾಲೆಯಲ್ಲಿ, ರಾಮನಿಗೆ, ವಿದ್ಯಾರ್ಥಿಯ ದೆಸೆಯಿಂದ, ಗೆಳೆಯನೇ, ಗುರುಗಳಿಂದ, ಭುವನಳ

## – ಚಟುವಟಿಕೆ –

೧. ಉದ್ಯಾನವನವನ್ನು ಕುರಿತು ಒಂದು ಕವಿತೆ ರಚಿಸಿ.

೨. ಪರಿಸರ ವರ್ಣನೆಗೆ ಸಂಬಂಧಿಸಿದ ಇತರ ಕವನಗಳನ್ನು ಓದಿ.

೩. ಉದ್ಯಾನವನಕ್ಕೆ ಭೇಟಿ ನೀಡಿ, ನಿಮ್ಮ ಅನುಭವಗಳನ್ನು ಕುರಿತ ನಿಯೋಜಿತ ಪ್ರಬಂಧ ಬರೆಯಿರಿ.

೪. ನಿಮ್ಮ ಸುತ್ತ ಕಂಡು ಬರುವ ವಿವಿಧ ರೀತಿಯ ಮರಗಳ ಹೆಸರುಗಳನ್ನು ಪಟ್ಟಿ ಮಾಡಿ.

☆ ☆ ☆ ☆ ☆

# ೧೦. ಕರಾಳ ರಾತ್ರಿ (ಗದ್ಯ)

ಒಂದು ಶಾಲೆ. ಶಿಕ್ಷಕಿ ಪಾರ್ವತಿಯ ಸುತ್ತ ೫-೬ ಮಕ್ಕಳು ಕುಳಿತಿದ್ದಾರೆ. ಸರಸು, ಭರತ್, ನಸೀಮಾ, ಭುವನ ಹಾಗೂ ಜಾರ್ಜ್ ಅಲ್ಲದೆ ಇನ್ನೂ ಕೆಲವರು. ಶಾಲಾ ಕೈದೋಟದ ಕೆಲಸಕ್ಕಾಗಿ ಸೇರಿದ್ದರು. ಕೈದೋಟದ ಕೆಲಸವೂ ಬೇಗನೆ ಮುಗಿದಿತ್ತು. ಅಷ್ಟರಲ್ಲಿ ಕಿಟ್ಟು ಮತ್ತು ಅಮೀರ್ ಏದುಸಿರು ಬಿಡುತ್ತಾ ಓಡಿ ಬಂದರು.

ಶಿಕ್ಷಕಿ : ಯಾಕೆ ಓಡಿ ಬರುತ್ತೀರಿ? ಏನಾಯಿತು?

ಕಿಟ್ಟು : ಟೀಚರ್, ಕೈದೋಟದ ಹಿಂಭಾಗದಲ್ಲಿ ಯಾರೋ ಬೇಲಿಯನ್ನು ಕಿತ್ತಿದ್ದಾರೆ. ಅಷ್ಟೇ ಅಲ್ಲ, ಶಾಲೆಗಾಗಿ ನಾವು ಬೆಳೆದ ಬದನೆಕಾಯಿ, ಹುರುಳಿಕಾಯಿಗಳನ್ನು ಕಿತ್ತುಕೊಂಡು ಹೋಗಿದ್ದಾರೆ.

ಅಮೀರ್ : ಅಷ್ಟೇ ಅಲ್ಲ, ಗಿಡಗಳನ್ನೆಲ್ಲ ನಾಶ ಮಾಡಿದ್ದಾರೆ.

ಶಿಕ್ಷಕಿ : ಇದು ಒಂದು ರೀತಿಯ ವಿಧ್ವಂಸಕ ಕೃತ್ಯವೇ ಸರಿ. ಇಂದು ಶಾಲೆಯನ್ನು ಹಾಳು ಮಾಡುತ್ತಾರೆ. ನಾಳೆ ದೇಶವನ್ನು ನಾಶ ಮಾಡುತ್ತಾರೆ. ಮರೆತಿರಾ? ವಿಧ್ವಂಸಕರು ಮುಂಬಯಿ ಮಹಾನಗರವನ್ನು ರಾತ್ರೋರಾತ್ರಿ ನಾಶ ಮಾಡಲು ಸಂಚು ಮಾಡಿದ್ದರು. ಬಹಳ ಪ್ರಯಾಸದಿಂದ ಪೊಲೀಸರು ಅದನ್ನು ಬಯಲಿಗೆಳೆದಿದ್ದಾರೆ.

ಭುವನ : ವಿಧ್ವಂಸಕರೇಕೆ ನಗರವನ್ನು ನಾಶಗೊಳಿಸುತ್ತಾರೆ?

ಶಿಕ್ಷಕಿ : ೨೬.೧೧.೨೦೦೮ರಲ್ಲಿ ನಡೆದ ಒಂದು ಘಟನೆ ಹೇಳುತ್ತೇನೆ. ಆಗ ನಿಮಗೆ ಅರ್ಥವಾಗುತ್ತದೆ ವಿಧ್ವಂಸಕರು, ಉಗ್ರಗಾಮಿಗಳೆಂದರೆ ಯಾರು? ಎಂದು. ಆ ದಿನ ಮುಂಬಯಿಯಲ್ಲಿ ಒಂದು ಭಯಾನಕ ಹತ್ಯಾಕಾಂಡ ನಡೆಯಿತು. ನೂರಾರು ಜನರ ಮಾರಣ ಹೋಮ ನಡೆಯಿತು.

ಜಾರ್ಜ್ : ಹೌದೇ? ವಿವರವಾಗಿ ಹೇಳಿ ಟೀಚರ್.

ಶಿಕ್ಷಕಿ : ಹೇಳುತ್ತೇನೆ... ಆ ದಿನ ..... ನಟ್ಟ ನಡುರಾತ್ರಿ. ಅಮರ ಸಿನ್ಹ ಸೋಳುಂಕಿ ಎಂಬ ಮೀನುಗಾರ ಏದುಸಿರು ಬಿಡುತ್ತಾ, ಪ್ರಾಣಭಯದಿಂದ ಮುಂಬಯಿ ಕಡಲತೀರದೆಡೆ ದೋಣಿ ನಡೆಸುತ್ತಿದ್ದ. ಅವನ ಹಿಂದೆ ಗನ್ ಹಿಡಿದು ಹತ್ತು ಮಂದಿ ಉಗ್ರರು ನಿಂತಿದ್ದರು. ಈ ಪಾತಕಿಗಳು ಸೋಳುಂಕಿಯ ಕಣ್ಣೆದುರೇ ಆತನ ನಾಲ್ವರು ಮಿತ್ರರನ್ನು ಕೊಂದು ಸಮುದ್ರದ ನೀರಿಗೆಸೆದಿದ್ದರು.

ಭುವನ : ಈ ಪಾತಕಿಗಳು ಎಲ್ಲಿಂದ ಬಂದರು? ಅವರನ್ನೇಕೆ ಸೋಳುಂಕಿ ತನ್ನ ದೋಣಿ ಹತ್ತಲು ಬಿಟ್ಟ?

ಶಿಕ್ಷಕಿ : ಅಯ್ಯೋ... ಇಲ್ಲೂ ಮೋಸವಾಯಿತು. ಉಗ್ರಗಾಮಿಗಳು ಕರಾಚಿಯಿಂದ ಹೊರಟು, ಸಮುದ್ರದ ಮಧ್ಯೆ ಸೋಳುಂಕಿಯ 'ಕುಬೇರ್' ಎಂಬ ಮೀನು ಹಿಡಿಯುವ ದೋಣಿಯನ್ನು ಹತ್ತಿದರು. ತಾವು ಅಪಾಯದಲ್ಲಿದ್ದೇವೆ ಎಂಬುದನ್ನು ಸೂಚಿಸಲು ಬಿಳಿಯ ಬಾವುಟ ತೋರಿಸಿದರು.

ಸರಸು : ಇದನ್ನು ಸೋಳುಂಕಿ ನಂಬಿದರೇ?

ಶಿಕ್ಷಕಿ : ಹ್ಞಾ, ಸೋಳುಂಕಿ ಹಾಗೂ ಅವನ ಜೊತೆಗಾರರು ನಂಬಿ, ತಮ್ಮ ದೋಣಿಗೆ ಆ ಹತ್ತು

ಮಂದಿಯನ್ನು ಹತ್ತಿಸಿಕೊಂಡರು. ಇದೇ ಅವರು ಮಾಡಿದ ತಪ್ಪು. ಮುಂಬಯಿಯನ್ನು ನಾಶ ಮಾಡಲು ಸಂಚು ಮಾಡುವ ಉಗ್ರರನ್ನು ತಾವು ಕರೆತರುತ್ತಿದ್ದೇವೆ ಎಂದು ಅವರಿಗೆ ಗೊತ್ತಾಗಲಿಲ್ಲ.

ಭುವನ : ಇದೆಲ್ಲ ಎಲ್ಲಿ ನಡೆಯಿತು?

ಶಿಕ್ಷಕಿ : ಗುಜರಾತಿನ ಪೋರಬಂದರ್‌ನ ಕಡಲಿನಲ್ಲಿ. ಪೋರ್‌ಬಂದರ್ ಗಾಂಧೀಜಿ ಹುಟ್ಟಿದ ಭೂಮಿ. ಆದರೀಗ ಪೋರ್‌ಬಂದರ್ ಕಡಲಿನ ಮೂಲಕ ಉಗ್ರ ಸಂಚುಗಾರರ ತಂಡ ಮುಂಬಯಿಗೆ ಬರುತ್ತಿತ್ತು.

ಜಾರ್ಜ್ : ಅವರೇಕೆ ಜನರನ್ನು ಕೊಲ್ಲುತ್ತಾರೆ? ಅವರೆಲ್ಲ ಯಾರು?

ಶಿಕ್ಷಕಿ : ಫಿದಾಯಿನ್, ಜೆಹಾದಿ ಮುಂತಾದ ಬೇರೆ ಬೇರೆ ಹೆಸರಿನ ಉಗ್ರಗಾಮಿಗಳು ಇವರು. ಇವರದು ಮತೀಯ ಸಂಘಟನೆ. ಬೇರೆ ಧರ್ಮದವರನ್ನು ಕೊಂದರೆ ತಮ್ಮ ದೇವರಿಗೆ ಪ್ರೀತಿ ಎಂದು ನಂಬಿದ್ದಾರೆ. ಬೇರೆ ಪಂಗಡದ ತಮ್ಮವರನ್ನೂ ಇವರು ದ್ವೇಷಿಸುತ್ತಾರೆ. ಇತರರನ್ನು ಕೊಲ್ಲಲೆಂದೇ ಇವರಿಗೆ ತರಬೇತಿ ನೀಡಲಾಗುತ್ತದೆ. ಜೊತೆಗೆ ಹಣದ ಆಸೆ, ಧಾರ್ಮಿಕ ಕರ್ತವ್ಯ ಎಂದೆಲ್ಲ ನಂಬಿಸಿ, ಅವರನ್ನು ಸೆಳೆಯುತ್ತಾರೆ.

ಕಿಟ್ಟು : ಇವರಿಂದ ನಮಗೆ ಹೇಗೆಲ್ಲ ಅಪಾಯ ಬರುತ್ತದೆ?

ಶಿಕ್ಷಕಿ : ಇವರಿಂದ ದೇಶದ ಅಸ್ಥಿರತೆ ಹೆಚ್ಚುತ್ತದೆ. ಜನಜೀವನ ಅಲ್ಲೋಲಕಲ್ಲೋಲವಾಗುತ್ತದೆ. ಅಮೆರಿಕ, ಲಂಡನ್, ದೆಹಲಿ, ಮುಂಬಯಿ, ಹೀಗೆ ಅನೇಕ ಕಡೆ ಅವರು ಸಾವಿರಾರು ಜನರನ್ನು ಸಾಯಿಸಿದ್ದಾರೆ.

ಭರತ್ : ಆಮೇಲೆ ಏನಾಯಿತು ಹೇಳಿ ಟೀಚರ್.

ಶಿಕ್ಷಕಿ : ಆಮೇಲೇನು? ಮುಂಬಯಿ ಹೊಕ್ಕ ನಂತರ ಐದು ಗುಂಪುಗಳಾಗಿ ಈ ಹಂತಕರು ಹೊರಟರು. ನಾರಿಮನ್ ಹೌಸ್, ಹೋಟೆಲ್ ತಾಜ್, ಹೋಟೆಲ್ ಒಬೆರಾಯ್, ಹೋಟೆಲ್ ಟ್ರೈಡೆಂಟ್, ರೈಲ್ವೇ ನಿಲ್ದಾಣ, ಕಾಮಾ ಆಸ್ಪತ್ರೆ, ಜಿ.ಟಿ. ಆಸ್ಪತ್ರೆಗಳ ಮೇಲೆ ಈ ತಂಡಗಳು ಏಕಾಏಕಿ ದಾಳಿ ಮಾಡಿದರು. ಇವುಗಳಲ್ಲಿದ್ದ ನೂರಾರು ವಿದೇಶಿಯರನ್ನು ಅನ್ಯಾಯವಾಗಿ ಕೊಂದರು. ನೂರಾರು ಪ್ರಯಾಣಿಕರೂ ಬಲಿಯಾದರು.

ನಸೀಮಾ : ನಮ್ಮ ಪೊಲೀಸರು ಇರಲಿಲ್ಲವೇ? ಅವರೇಕೆ ತಡೆಯಲಿಲ್ಲ?

ಶಿಕ್ಷಕಿ : ಇದು ಮಧ್ಯರಾತ್ರಿಯಲ್ಲಿ ನಡೆದ ಹಠಾತ್ ದಾಳಿ. ವಿಷಯ ತಿಳಿದ ಕೂಡಲೇ ನಮ್ಮ ಪೋಲೀಸ್ ಪಡೆಯೂ ಧಾವಿಸಿತು. ಅವರೊಡನೆ ನಡೆದ ಹೋರಾಟದಲ್ಲಿ ಪೋಲೀಸ್ ಪಡೆಯ ಹಿರಿಯ ಅಧಿಕಾರಿಗಳಾದ ಹೇಮಂತ ಕರ್ಕರೆ, ಅಶೋಕ ಕಮತೆ, ವಿಜಯ ಸಲುಸ್ಕರ್ ಹಾಗೂ ಹದಿಮೂರು ಮಂದಿ ಪೋಲೀಸರು, ರಾಷ್ಟ್ರೀಯ ರಕ್ಷಣಾ ಪಡೆಯ ಕಮ್ಯಾಂಡೋ,

ಕರ್ನಾಟಕದ ವೀರ ತರುಣ ಮೇಜರ್ ಸಂದೀಪ್ ಉನ್ನಿಕೃಷ್ಣನ್, ಹವಾಲ್ದಾರ್ ಗಜೇಂದ್ರಸಿಂಗ್ ವೀರ ಮರಣವನ್ನು ಹೊಂದಿದರು.

ನಸೀಮಾ : ರಾಷ್ಟ್ರೀಯ ರಕ್ಷಣಾ ಪಡೆ, ಕಮ್ಯಾಂಡೋ ಎಂದರೆ ಯಾರು ಟೀಚರ್?

ಶಿಕ್ಷಕಿ : ಇದನ್ನು ಸಂಕ್ಷಿಪ್ತವಾಗಿ ಎನ್.ಎಸ್.ಜಿ. ಎಂದು ಹೇಳುತ್ತಾರೆ. ಈ ಸೈನಿಕರನ್ನು ಕಮ್ಯಾಂಡೋ ಎಂದು ಕರೆಯುತ್ತಾರೆ. ಎನ್.ಎಸ್.ಜಿ. ಭಾರತದ ಅತ್ಯಂತ ಹೆಮ್ಮೆಯ ಧೀರಪಡೆ, ದೇಶಕ್ಕಾಗಿ ಪ್ರಾಣಾರ್ಪಣೆಗೂ ಸಿದ್ಧ ಇವರು. ಇವರನ್ನು ಬ್ಲ್ಯಾಕ್‌ಕ್ಯಾಟ್ ಎಂದೂ ಕರೆಯುತ್ತಾರೆ. ಕಪ್ಪು ಉಡುಪು ಇವರ ಸಮವಸ್ತ್ರ.

ಜಾರ್ಜ್ : ಮೇಜರ್ ಸಂದೀಪ್ ಉನ್ನಿಕೃಷ್ಣನ್ ಎಂದರೆ ಯಾರು ಟೀಚರ್?

ಶಿಕ್ಷಕಿ : ಈತ ಬೆಂಗಳೂರಿನ ವೀರ ತರುಣ. ಈತನ ತಂದೆ ನಿವೃತ್ತ ಇಸ್ರೋ ಅಧಿಕಾರಿ ಉನ್ನಿಕೃಷ್ಣನ್. ತಾಯಿ ಧನಲಕ್ಷ್ಮಿ. ಇವರು ಕೇರಳದ ಕೋಜಿಕೋಡೆಯ ಚೆರುವನಲ್ಲೂರು ಗ್ರಾಮದಿಂದ ಬೆಂಗಳೂರಿಗೆ ಬಂದು ನೆಲಸಿದವರು.







ಸರಸು : ಅವರಿಗೆ ಎಷ್ಟು ಜನ ಮಕ್ಕಳು?

ಶಿಕ್ಷಕಿ : ಸಂದೀಪ್ ಅವರಿಗೆ ಒಬ್ಬನೇ ಮಗ. ೧೫ನೇ ಮಾರ್ಚ್ ೧೯೭೭ರಂದು ಹುಟ್ಟಿದ. ಸೈನ್ಯಕ್ಕೆ ಸೇರಿ ದೇಶಸೇವೆ ಮಾಡಬೇಕೆಂದು ಆತನಿಗೆ ಚಿಕ್ಕಂದಿನಿಂದ ಆಸೆ. ತನ್ನ ಆಸೆಯಂತೆ ಸೈನ್ಯಕ್ಕೆ ಸೇರಿದ. ೨೦೦೭ರಲ್ಲಿ ಎನ್.ಎಸ್.ಜಿ.ಗೆ ಆಯ್ಕೆಯಾಗಿದ್ದು ಈತನ ವಿಶೇಷ.

ಭರತ್ : ಎನ್.ಎಸ್.ಜಿ. ಉಗ್ರರನ್ನು ಹೇಗೆ ಎದುರಿಸಿತು ಟೀಚರ್?

ಶಿಕ್ಷಕಿ : ಇದನ್ನು ವಿವರಿಸಲು ನನಗೆ ಬಹಳ ದುಃಖವೂ, ಸಂತೋಷವೂ ಒಟ್ಟಿಗೇ ಆಗುತ್ತಿದೆ. ಮೇಜರ್ ಸಂದೀಪನ ನಾಯಕತ್ವದಲ್ಲಿ ನೂರು ಮಂದಿಯ ಕಮ್ಯಾಂಡೋ ಪಡೆ ರಾತ್ರೋರಾತ್ರಿ ದಿಲ್ಲಿಯಿಂದ ಮುಂಬಯಿಗೆ ಬಂದಿಳಿಯಿತು. ಶತ್ರುಗಳನ್ನು ಎದುರಿಸಲು ಅವರು ಕಾರ್ಯತಂತ್ರ ರೂಪಿಸಿದರು. ಇದನ್ನು 'ಆಪರೇಷನ್ ಬ್ಲಾಕ್ ಟೋರ್ನೆಡೊ' ಎಂದು ಕರೆಯಲಾಯಿತು.

ಸರಸು : ಮೇಜರ್ ಸಂದೀಪ್ ಹೇಗೆ ಶತ್ರುಗಳನ್ನು ಎದುರಿಸಿದರು ಟೀಚರ್?

ಶಿಕ್ಷಕಿ : ಮೇಜರ್ ಸಂದೀಪ್ ಇದ್ದ ತಂಡ ಹೋಟೆಲ್ ತಾಜ್ ಮೇಲೆ ಹೆಲಿಕಾಪ್ಟರ್‌ನಲ್ಲಿ ಬಂದಿಳಿಯಿತು. ಅವರು ನೇರವಾಗಿ ಆರನೆಯ ಮಹಡಿಗೆ ಪ್ರವೇಶ ಮಾಡಿದರು. ಅಲ್ಲಿಂದ ಉಗ್ರಗಾಮಿಗಳನ್ನು ಒಂದೊಂದೇ ಕೆಳಮಹಡಿಗೆ ಅಟ್ಟಿಸಿಕೊಂಡು ಹೋದರು. ಉಗ್ರಗಾಮಿಗಳಿಂದ ಬಿಡುಗಡೆ ಹೊಂದಿದ ಮಹಡಿಯಲ್ಲಿದ್ದವರನ್ನು ಜೋಪಾನವಾಗಿ ಪಾರು ಮಾಡುವ ವ್ಯವಸ್ಥೆ ಮಾಡಿದರು. ಇದನ್ನು ದೂರದರ್ಶನದಲ್ಲಿ ತೋರಿಸುತ್ತಲೇ ಇದ್ದರು. ನೋಡಿದವರಿಗೆ ಮೈ 'ಜುಂ' ಎನ್ನುತ್ತಿತ್ತು.

ಭರತ್ : ಮುಂದೇನಾಯಿತು ಹೇಳಿ ಟೀಚರ್?

ಶಿಕ್ಷಕಿ : ಶತ್ರುಗಳನ್ನು ಒಂದನೆಯ ಮಹಡಿಗೆ ಅಟ್ಟಿಸಿಕೊಂಡು ಬಂದಾಗ, ಅವರೊಡನೆ ಮುಖಾಮುಖಿ ಹೋರಾಡಬೇಕಾಯಿತು. ಸುತ್ತಲೂ ಕತ್ತಲು. ಗುಂಡಿನ ದಾಳಿಯಲ್ಲಿ ವಿದ್ಯುತ್ ಸಂಪರ್ಕವೂ ಕೆಟ್ಟುಹೋಗಿತ್ತು. 'ನೀವ್ಯಾರೂ ಬರಬೇಡಿ, ನಾನು ಅವರನ್ನು ನೋಡಿಕೊಳ್ಳುತ್ತೇನೆ' ಎಂದವನೇ ಸಂದೀಪ್ ಶತ್ರುಗಳ ಮೇಲೆ ಆಕ್ರಮಣ ಮಾಡಿದ. ಜೊತೆಗಿದ್ದ ಸುನಿಲ್ ಯಾದವ್ ಗುಂಡೇಟು ತಗುಲಿ ಕೆಳಕ್ಕೆ ಬಿದ್ದಾಗ, ಅವನನ್ನು ಎಳೆದು ತಂದು ರಕ್ಷಿಸಿದ. ಇದ್ದಕ್ಕಿದ್ದಂತೆ ಮರೆಯಲ್ಲಿ ನಿಂತಿದ್ದ ಉಗ್ರಗಾಮಿಯೊಬ್ಬ ಸಂದೀಪನ ಬೆನ್ನಿಗೆ ಗುಂಡು ಹಾರಿಸಿದ. ಕನ್ನಡ ನೆಲದ ವೀರರತ್ನ ಹೀಗೆ ಕೆಳಕ್ಕುರುಳಿತು.

ಜಾರ್ಜ್ : ಅಯ್ಯೋ, ಎಂತಹ ಕ್ರೂರರು ಈ ಉಗ್ರಗಾಮಿಗಳು? ನಮ್ಮವರು ಅವರನ್ನು ಹಿಡಿದರೇ?

ಶಿಕ್ಷಕಿ : ನವೆಂಬರ್ ೨೯ಕ್ಕೆ ಈ ಹೋರಾಟ ಮುಗಿಯಿತು. ಒಬ್ಬನ ಹೊರತಾಗಿ ಉಳಿದೆಲ್ಲ ಉಗ್ರಗಾಮಿಗಳು ಹತರಾಗಿದ್ದರು. ಸೆರೆಸಿಕ್ಕಿದ ಅಮೀರ್ ಕಸಬ್‌ನನ್ನು ವಿಚಾರಣೆಗೆ ಒಳಪಡಿಸಲಾಗಿ ಅವನಿಗೆ ಘೋರಶಿಕ್ಷೆ ಆಗಿದೆ. ಆದರೆ ಮೂರು ದಿನಗಳ ಈ ಸಮರದಲ್ಲಿ ನಾವು ಅನೇಕ ದೇಶಪ್ರೇಮಿಗಳನ್ನು ಕಳೆದುಕೊಂಡೆವು.

ನಸೀಮಾ : ಪಾಪ, ಸಂದೀಪನ ತಾಯಿ ತಂದೆಗಳಿಗೆ ಎಷ್ಟು ದುಃಖವಾಗಿರಬಹುದು? ಅಲ್ಲವೇ ಟೀಚರ್?

ಶಿಕ್ಷಕಿ : ನಿಜ, ನಿಜ. ತಂದೆ, ತಾಯಿ, ಕನ್ನಡನಾಡು ಮಾತ್ರವಲ್ಲ, ಇಡೀ ದೇಶ ಆತನ ಸಾವಿಗಾಗಿ ಕಣ್ಣೀರಿಟ್ಟಿತು. ಆ ಶೋಕದಲ್ಲಿಯೂ ತಂದೆ ಉನ್ನಿಕೃಷ್ಣನ್ ಹೇಳಿದ ಮಾತು ಎಲ್ಲರಿಗೂ ದಾರಿದೀಪವಾಗಿದೆ.

ಎಲ್ಲರೂ : ಅದೇನು ಟೀಚರ್?

ಶಿಕ್ಷಕಿ : "ನನ್ನ ಮಗ ಒಂದು ಅಪರೂಪದ ವಜ್ರ. ಅವನು ಸತ್ತನೆಂದು ನನಗೆ ದುಃಖವಿಲ್ಲ. ಅವನು ಸತ್ತಿದ್ದರೂ ಬದುಕಿದ್ದಾನೆ".

ಎಲ್ಲರೂ : ಹೌದು ಟೀಚರ್, ಮೇಜರ್ ಸಂದೀಪ್ ಎಂದೆಂದೂ ಅಮರ. ಎಂದೆಂದೂ ಅಮರ !

## – ಓದಿ ತಿಳಿಯಿರಿ –

| | | | |
|---|---|---|---|
| ಅಸ್ಥಿರತೆ | – ಸಮತೋಲನ ತಪ್ಪುವುದು | ವೀರಮರಣ | – ಯುದ್ಧದಲ್ಲಿ ಹೋರಾಡಿ ಸಾವನ್ನಪ್ಪುವುದು |
| ವಿಧ್ವಂಸಕ | – ನಾಶ ಮಾಡುವವನು | ಪ್ರಾಣಭಯ | – ಜೀವಕ್ಕೆ ಬೆದರಿಕೆ |
| ದಾಳಿ | – ಆಕ್ರಮಣ, ಹೋರಾಟ | ಬಯಲಿಗೆಳೆ | – ರಹಸ್ಯ ಭೇದಿಸು |
| ಸೆಳೆ | – ಆಕರ್ಷಿಸು | ಹಠಾತ್ | – ಇದ್ದಕ್ಕಿದ್ದಂತೆ |
| ಅಪರೂಪ | – ವಿರಳ | ಉಗ್ರಗಾಮಿ | – ದೇಶಕ್ಕೆ ಅಪಾಯವನ್ನುಂಟು ಮಾಡುವ ಆತಂಕವಾದಿ |
| ಧಾವಿಸು | – ವೇಗವಾಗಿ ಚಲಿಸು | ಕಾರ್ಯತಂತ್ರ | – ಯೋಜನೆ |
| ಮುಖಾಮುಖಿ | – ಎದುರೆದುರು | ಅಲ್ಲೋಲಕಲ್ಲೋಲ | – ಅಲೆಗಳಂತೆ ಮೇಲೆ ಕೆಳಗೆ ಆಗುವುದು |
| ಘೋರ | – ಕ್ರೂರ ಕಠಿಣ | ವಿಚಾರಣೆ | – ಪರಿಶೀಲಿಸು |
| ಬಿಡುಗಡೆ | – ಸ್ವಾತಂತ್ರ್ಯ | | |

## – ಗಮನಿಸಿರಿ –

| | |
|---|---|
| ಇಸ್ರೋ ISRO | – ಭಾರತೀಯ ಬಾಹ್ಯಾಕಾಶ ಸಂಶೋಧನಾ ಕೇಂದ್ರ (Indian Space Research Organisation) |
| ಎನ್.ಎಸ್.ಜಿ. | – ರಾಷ್ಟ್ರೀಯ ರಕ್ಷಣಾ ಪಡೆ (National Security Group) |
| ಕಮ್ಯಾಂಡೋ | – ರಾಷ್ಟ್ರೀಯ ರಕ್ಷಣಾ ಪಡೆಯ ಸೈನಿಕ |
| ಬ್ಲ್ಯಾಕ್ ಕ್ಯಾಟ್ಸ್ | – ತರಬೇತಿ ಹೊಂದಿದ ಕಪ್ಪು ಉಡುಪಿನ ಕಮ್ಯಾಂಡೋಗಳು |
| ಫಿದಾಯಿನ್, ಜೆಹಾದಿ | – ಉಗ್ರಗಾಮಿ ಸಂಘಟನೆಗಳು |
| ಆಪರೇಷನ್ ಬ್ಲ್ಯಾಕ್ ಟೊರ್ನಾಡೋ | – ೨೬.೧೧.೨೦೦೮ರಂದು ದಾಳಿ ಮಾಡಿದ ಉಗ್ರರನ್ನು ಹಿಡಿಯಲು ಯೋಜಿಸಿದ ವಿಶೇಷ ಕಾರ್ಯತಂತ್ರ |

## – ಅಭ್ಯಾಸ –

### ಅ. ಹೊಂದಿಸಿ ಬರೆಯಿರಿ:

| ಅ | ಬ |
|---|---|
| ೧. ಆಪರೇಷನ್ ಬ್ಲ್ಯಾಕ್ ಟೋರ್ನಾಡೋ | ೧. ಕಮ್ಯಾಂಡೋಗಳಿಗೆ ಇರುವ ಇನ್ನೊಂದು ಹೆಸರು |
| ೨. ಎನ್.ಎಸ್.ಜಿ. | ೨. ತರಬೇತಿ ಹೊಂದಿದ ರಕ್ಷಣಾ ತಂಡದವರು |
| ೩. ಬ್ಲ್ಯಾಕ್ ಕ್ಯಾಟ್ಸ್ | ೩. ಮುಂಬಯಿಯ ಒಂದು ಮೀನು ಹಿಡಿಯುವ ದೋಣಿ |
| ೪. ಕಮ್ಯಾಂಡೋ | ೪. ಉಗ್ರಗಾಮಿಗಳನ್ನು ಹಿಡಿಯಲು ರೂಪಿಸಿದ ಕಾರ್ಯತಂತ್ರ |
| ೫. ಕುಬೇರ್ | ೫. ರಾಷ್ಟ್ರೀಯ ರಕ್ಷಣಾ ಪಡೆ |

### ಆ. ಬಿಟ್ಟ ಸ್ಥಳಗಳನ್ನು ಆವರಣದಲ್ಲಿ ಕೊಟ್ಟಿರುವ ಸೂಕ್ತ ಪದದಿಂದ ಭರ್ತಿ ಮಾಡಿ:

೧. ಅಮರಸಿನ್ಹ ಸೋಳುಂಕಿ ಒಬ್ಬ ________________
(ಕಮ್ಯಾಂಡೋ, ಪೊಲೀಸ್ ಅಧಿಕಾರಿ, ಮೀನುಗಾರ, ಉಗ್ರಗಾಮಿ)

೨. ಕುಬೇರ್ ಎಂಬುದು ____________ ಹೆಸರು.
(ಮೀನುದೋಣಿ, ಹೋಟೆಲ್, ರಕ್ಷಣಾ ತಂಡ, ಮುಂಬಯಿಯ ಪ್ರದೇಶ)

೩. ಉನ್ನಿಕೃಷ್ಣನ್ ____________ನ ತಂದೆ
(ಅಮರಸಿನ್ಹ ಸೋಳುಂಕಿ, ಮೇಜರ್ ಸಂದೀಪ್, ಸುನಲ್‌ಯಾದವ್. ಹೇಮಂತ್ ಕರ್ಕರೆ)



### ಇ. ಈ ವಾಕ್ಯಗಳು ಸರಿಯೇ ತಪ್ಪೇ ಎಂಬುದನ್ನು ಗುರುತಿಸಿರಿ.

೧. ಮೇಜರ್ ಸಂದೀಪ್‌ನ ತಂದೆ ಉನ್ನಿಕೃಷ್ಣನ್ ಮುಂಬಯಿ ನಿವಾಸಿ ಸರಿ / ತಪ್ಪು

೨. ಬ್ಲ್ಯಾಕ್ ಕ್ಯಾಟ್ಸ್ ಎಂದರೆ ದೇಶದ್ರೋಹಿಗಳ ಸಂಘಟನೆ ಸರಿ / ತಪ್ಪು

೩. ಜೆಹಾದಿಗಳೆಂದರೆ ವಿಶ್ವಶಾಂತಿಗಾಗಿ ಸೇರಿದ ಸಂಘಟನೆ ಸರಿ / ತಪ್ಪು

೪. ಪೋರ್‌ಬಂದರು ಗಾಂಧೀಜಿಯವರ ಜನ್ಮಸ್ಥಳ ಸರಿ / ತಪ್ಪು

### ಈ. ಈ ಮಾತುಗಳನ್ನು ಯಾರು ಯಾರಿಗೆ ಯಾವಾಗ ಹೇಳಿದರು?

೧. "ನನ್ನ ಮಗ ಒಂದು ಅಪರೂಪದ ವಜ್ರ"

೨. "ನೀವ್ಯಾರೂ ಬರಬೇಡಿ, ನಾನು ಅವರನ್ನು ನೋಡಿಕೊಳ್ಳುತ್ತೇನೆ"

೩. "ಮೇಜರ್ ಸಂದೀಪ್ ಎಂದೆಂದೂ ಅಮರ"

ಉ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:

೧. ಮೇಜರ್ ಸಂದೀಪನ ತಂದೆತಾಯಿಗಳು ಯಾರು?

೨. ಬಾಲಕ ಸಂದೀಪನು ಏನಾಗಬೇಕೆಂದು ಆಶಿಸಿದ್ದನು?

೩. ಜೆಹಾದಿ ಉಗ್ರಗಾಮಿಗಳು ಎಲ್ಲೆಲ್ಲಿ ದಾಳಿ ಮಾಡಿದರು?

೪. ಮುಂಬಯಿ ದಾಳಿಯಲ್ಲಿ ಹತರಾದ ಪೊಲೀಸ್ ಅಧಿಕಾರಿಗಳು ಯಾರು?

೫. ಮುಂಬಯಿಯ ದಾಳಿ ಎಷ್ಟು ದಿನಗಳಲ್ಲಿ ಮುಕ್ತಾಯವಾಯಿತು?

ಊ. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ:

ದಾಳಿ, ಧಾವಿಸು, ನಿವೃತ್ತ, ದೇಶಸೇವೆ, ಬಿಡುಗಡೆ, ವಿಚಾರಣೆ, ವೀರಮರಣ, ಘೋರಶಿಕ್ಷೆ, ದಾರಿದೀಪ, ದುಃಖ, ಅಪರೂಪ, ಪ್ರಾಣಭಯ, ಸೆಳೆ

ಋ. ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:

೧. ಅಮರ್‌ಸಿಂಗ್ ಸೋಳುಂಕಿ ಯಾರು? ಉಗ್ರರು ಹೇಗೆ ಅವನ ಸಹಾಯ ಪಡೆದರು?

೨. ರಾಷ್ಟ್ರೀಯ ರಕ್ಷಣಾ ಪಡೆ ಎಂದರೇನು? ಇದರ ವಿಶೇಷವೇನು?

೩. ಮುಂಬಯಿಯ ದಾಳಿಯನ್ನು ಎದುರಿಸಲು ರಾಷ್ಟ್ರೀಯ ರಕ್ಷಣಾ ಪಡೆ ರೂಪಿಸಿದ ಕಾರ್ಯತಂತ್ರ ಯಾವುದು?

೪. ಮೇಜರ್ ಸಂದೀಪ್ ಉನ್ನಿಕೃಷ್ಣನ್ ಯಾವ ರೀತಿ ಶತ್ರುಗಳನ್ನು ಎದುರಿಸಿದ?

೫. ಉನ್ನಿಕೃಷ್ಣನ್ ಮಗನ ಸಾವಿನ ಬಗ್ಗೆ ಏನು ಹೇಳಿದರು?



## – ಭಾಷಾಭ್ಯಾಸ –

ಅ. ಈ ಪದಗಳನ್ನು ಮಾದರಿಯಂತೆ ಬಿಡಿಸಿ ಬರೆಯಿರಿ:

*ಮಾದರಿ : ಕೈ + ತೋಟ = ಕೈದೋಟ*

ಹೂದೋಟ, ಬಾಯ್ದೆರೆ, ಒಳಗಣ್ಣು, ಮೇಲ್ಗಣ್ಣು, ಮಳೆಗಾಲ

ಆ. ಈ ಪದಗಳನ್ನು ಮಾದರಿಯಂತೆ ಕೂಡಿಸಿ ಬರೆಯಿರಿ:

*ಮಾದರಿ : ಬಯಲಿಗೆ + ಎಳೆ = ಬಯಲಿಗೆಳೆ*

೧. ಗಮನ + ಇಟ್ಟು =

೨. ದೋಣಿ + ಇಂದ =

೩. ಬಲಿ + ಆದರು =

೪. ದೀಪ + ಆರಿದೆ =

**ಇ. ಈ ಪದಗಳ ರಚನೆಯನ್ನು ಗಮನಿಸಿ ಮಾದರಿಯಂತೆ ವಿಂಗಡಿಸಿ ಬರೆಯಿರಿ:**

***ಮಾದರಿ : ಕರಾಳ = ಕ್ + ಅ ರ್ + ಆ ಳ್ + ಅ***

***ರಾತ್ರಿ = ರ್+ ಆ ತ್ + ರ್ + ಇ***

ಮುಂಜಾನೆ, ಬೆಚ್ಚಿದರು, ಕಾಣಲಿಲ್ಲ, ಅರ್ಥವಾಗಲಿಲ್ಲ

**ಈ. ಈ ಪದಗಳ ಮೂಲರೂಪದಲ್ಲಿ ('ಅ' ಪಟ್ಟಿ) ಉಂಟಾಗಿರುವ ಬದಲಾವಣೆಗಳನ್ನು ಗಮನಿಸಿ:**

| ಅ | ಬ | ಅ | ಬ |
|---|---|---|---|
| ಕುಮಾರ | ಕುವರ | ಪುಸ್ತಕ | ಹೊತ್ತಗೆ |
| ಸಹಸ್ರ | ಸಾಸಿರ | ಸಿಂಹ | ಸಿಂಗ |
| ಕಾರ್ಯ | ಕಜ್ಜ | ಮೃದು | ಮಿದು |
| ಶಾಲೆ | ಸಾಲೆ | ವನ | ಬನ |
| ಕಾವ್ಯ | ಕಬ್ಬ | ವರ್ಷ | ವರುಷ |
| ಕವಿ | ಕಬ್ಬಿಗ | ಹರ್ಷ | ಹರುಷ |
| ಸಂತೋಷ | ಸಂತಸ | ದುಃಖ | ದುಕ್ಕ |

ಯಾವುದೇ ಬದಲಾವಣೆ ಇಲ್ಲದೆ ಕನ್ನಡ ಭಾಷೆಗೆ ಸೇರಿದ ಸಂಸ್ಕೃತ ಪದಗಳು 'ತತ್ಸಮ'ಗಳು. ಸಂಸ್ಕೃತ ಪದಗಳನ್ನು ಕನ್ನಡ ಭಾಷೆಗೆ ಹೊಂದುವಂತೆ ಪೂರ್ಣವಾಗಿ ಇಲ್ಲವೇ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಸ್ವೀಕರಿಸಿದ ಪದಗಳು 'ತದ್ಭವ'ಗಳು. ಮೇಲಿನ 'ಅ' ಪಟ್ಟಿ ತತ್ಸಮ ಪದಗಳನ್ನೂ, 'ಬ' ಪಟ್ಟಿ ತದ್ಭವ ರೂಪಗಳನ್ನು ತಿಳಿಸುತ್ತವೆ.

## – ಚಟುವಟಿಕೆ –

**ಅ. ಕೊಟ್ಟಿರುವ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಕಥೆಯನ್ನು ಬರೆಯಿರಿ:**

ಪಾಂಡವರು – ಕೌರವರು – ಮಹಾಭಾರತ ಯುದ್ಧ – ಅರ್ಜುನನ ಮಗ ಅಭಿಮನ್ಯು ಮಹಾವೀರ– ಬಾಲಕನಾಗಿದ್ದರೂ, ಯುದ್ಧ ಮಾಡುವ ಉತ್ಸಾಹ – ತಾಯಿ ಸುಭದ್ರೆಯ ಅಣ್ಣ ಶ್ರೀಕೃಷ್ಣ – ತಾಯಿಯ ಬಸಿರಲ್ಲಿ ಇದ್ದಾಗಲೇ ಕೃಷ್ಣನಿಂದ ಚಕ್ರವ್ಯೂಹದ ಬಗ್ಗೆ ಜ್ಞಾನ ಪಡೆದಿದ್ದು – ಚಕ್ರವ್ಯೂಹದ ಒಳಗೆ ಪ್ರವೇಶ ಮಾಡುವಷ್ಟು ಜ್ಞಾನ ಮಾತ್ರ – ಹೊರಬರುವ ದಾರಿ ತಿಳಿಯುವಷ್ಟರಲ್ಲಿ ತಾಯಿಗೆ ಎಚ್ಚರ– ದ್ರೋಣನಿಂದ ಕೌರವ ಸೈನ್ಯವನ್ನು ಚಕ್ರವ್ಯೂಹವಾಗಿ ರಚನೆ – ಚಕ್ರವ್ಯೂಹದೊಳಗೆ ಅಭಿಮನ್ಯು ಪ್ರವೇಶ– ಕರ್ಣ, ಅಶ್ವತ್ಥಾಮ, ದ್ರೋಣ, ದುಶ್ಶಾಸನ, ದುರ್ಯೋಧನ, ಎಲ್ಲರೂ ಅವನ ಮೇಲೆ ಆಕ್ರಮಣ, ಅಭಿಮನ್ಯುವಿನ ವೀರ ಮರಣ.

**ಆ. ಭಾರತದ ರಕ್ಷಣಾ ವ್ಯವಸ್ಥೆಯ ಬಗ್ಗೆ ತಿಳಿಯಿರಿ.**

**ಇ. 'ಕರ್ನಾಟಕದ ವೀರಯೋಧರು' ಪುಸ್ತಕ ಸಂಗ್ರಹಿಸಿ ಓದಿ.**

☆ ☆ ☆ ☆ ☆

# ೧೧. ತೇರು (ಪದ್ಯ)

– ಕೆ.ಎಸ್. ನರಸಿಂಹಸ್ವಾಮಿ





ಹೂವು ಬಾಡುವ ಮುನ್ನ ಊರ ಸೇರಲೆಬೇಕು;
ನಮ್ಮೂರ ತೇರಿಂದು, ಅದಕೆ ಹೋಗಲೆಬೇಕು.
ಹಿಡಿದ ಮಳೆ ಬಿಟ್ಟಿದೆ, ಬೇಗ ಹೆಜ್ಜೆಯ ಹಾಕು;
ಮಧ್ಯಾಹ್ನದೊಳಗಾಗಿ ನಮ್ಮೂರ ಸೇರೋಣ.
ತುಂಬ ಜನ ಸೇರುವರು, ಮರುಗ ಮಲ್ಲಿಗೆ ಜಾಜಿ
ರಾಶಿ ಬೀಳುವುದು ಒಳಗುಡಿಯ ದೇವರ ಮುಂದೆ;
ಎಡಹೆಗಲ ಮೇಲೆ ಮಗು, ಬಲಗೈಲಿ ಹೆಂಡತಿ–
ದೇವರಿಗೆ ಕೈಮುಗಿದು ಬಂದುಬಿಡುವರು. ಬಳಿಕ
ಬಂಡಿಯ ಕೆಳಗೆ ಕುಳಿತು ಬುತ್ತಿ ಬಿಚ್ಚುತ್ತಾರೆ.
ತಿಂದು, ಎಳನೀರ್ ಕುಡಿದು ಹೊರಟು ಹೋಗುತ್ತಾರೆ,
ಅಂಗಡಿಯಲ್ಲಿ ಕೊಂಡ ಬತ್ತಾಸು ಪುರಿಯೊಡನೆ.
ಈ ಮಂದಿ ದೇವರನು ನಂಬಿಹರೊ ಇಲ್ಲವೊ–
ವರ್ಷಕ್ಕೊಮ್ಮೆ ಗುಡಿಗೆ ಹೋಗಿ ಕೈಮುಗಿಯುವರು.
ವರುಷ ವರುಷವು ಜಾತ್ರೆ ಸೇರುವುದು, ಅಗಲುವುದು
ಸ್ಮೃತಿ ಪಟಲದಲ್ಲೊಂದು ಹಾಡಾಗಿ ಉಳಿಯುವುದು.

## ಕೃತಿ–ಕರ್ತೃ ಪರಿಚಯ



‘ಮೈಸೂರು ಮಲ್ಲಿಗೆ’ಯಿಂದ ಜನಪ್ರಿಯರಾದ ಡಾ॥ ಕೆ.ಎಸ್. ನರಸಿಂಹಸ್ವಾಮಿ (ಜನನ : ೧೯೧೫) ಮಂಡ್ಯ ಜಿಲ್ಲೆ ಕಿಕ್ಕೇರಿಯವರು. ಇಂಟರ್ ಮೀಡಿಯೇಟ್‌ವರೆಗೆ (ಇಂದಿನ ಪಿ.ಯು. ತರಗತಿ) ಶಿಕ್ಷಣ ಪಡೆದಿದ್ದ ಅವರು ಗೃಹ ನಿರ್ಮಾಣ ಮಂಡಳಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ‘ಮೈಸೂರು ಮಲ್ಲಿಗೆ, ಮನೆಯಿಂದ ಮನೆಗೆ, ತೆರೆದ ಬಾಗಿಲು, ಐರಾವತ, ದೀಪದ ಮಲ್ಲಿ, ಉಂಗುರ, ಶಿಲಾಲತೆ’ ಮೊದಲಾದ ಪ್ರಸಿದ್ಧ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರಿಗೆ ‘ದೇವರಾಜ ಬಹದ್ದೂರ್’ ಬಹುಮಾನ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಪಂಪ ಪ್ರಶಸ್ತಿ ಲಭಿಸಿವೆ. ‘ತೆರೆದ ಬಾಗಿಲು’ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪುರಸ್ಕಾರ ಪಡೆದಿರುವ ಕೆ.ಎಸ್.ನ. ಮೈಸೂರಿನಲ್ಲಿ ನಡೆದ ೭೦ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

‘ತೇರು’ ಕವಿತೆಯನ್ನು ಕೆ.ಎಸ್.ನ. ಅವರ ‘ಕೈಮರದ ನೆರಳಲ್ಲಿ’ ಕವನ ಸಂಕಲನದಿಂದ ಆಯ್ಕೆ ಮಾಡಲಾಗಿದೆ.



### – ಓದಿ ತಿಳಿಯಿರಿ –

| | | | |
|---|---|---|---|
| ತೇರು | – ರಥೋತ್ಸವ/ರಥ | ಹಿಡಿದ | – ಪ್ರಾರಂಭವಾದ |
| ಬಿಟ್ಟಿದೆ | – ನಿಂತಿದೆ | ಒಳಗುಡಿ | – ಗರ್ಭಗುಡಿ, ದೇವರ ವಿಗ್ರಹ ಇರುವ ಸ್ಥಳ |
| ಪುರಿ | – ಮಂಡಕ್ಕಿ, ಚುರುಮುರಿ | ಅಗಲು | – ದೂರವಾಗು, ಬಿಟ್ಟು ಹೋಗು |
| ಬುತ್ತಿ | – ಮನೆಯಿಂದ ಕಟ್ಟಿತಂದ ತಿನಿಸು | | |

ಬತ್ತಾಸು – ಸಕ್ಕರೆ ಪಾಕದಿಂದ ತಯಾರಿಸಿದ ಸಿಹಿ ತಿಂಡಿ (ಜಾತ್ರೆಯಲ್ಲಿ ಇದು ಸಾಮಾನ್ಯ. ಇದರ ಜತೆ ‘ಬೆಂಡು’ ಎಂಬ ಸಕ್ಕರೆ ಪಾಕದ ಕಡ್ಡಿಗಳೂ ಇರುತ್ತವೆ)

### – ಈ ಸಾಲುಗಳಿಗೆ ಬಂದಿರುವ ವಿಶೇಷಾರ್ಥವನ್ನು ಗಮನಿಸಿರಿ –

ಹೂವು ಬಾಡುವ ಮುನ್ನ
ಅದಕೆ ಹೋಗಲೇಬೇಕು
ತುಂಬ ಜನ ಸೇರುವುದು
ದೇವರಿಗೆ ಕೈ ಮುಗಿದು ಬಂದು ಬಿಡುವರು
ಬಂಡಿಯ ಕೆಳಗೆ
ಅಂಗಡಿಯಲ್ಲಿ ಕೊಂಡ ಬತ್ತಾಸು ಪುರಿಯೊಡನೆ
ಈ ಮಂದಿ ದೇವರನು ನಂಬಿಹರೊ ಇಲ್ಲವೊ
ಸ್ಮೃತಿಪಟಲದಲ್ಲೊಂದು ಹಾಡಾಗಿ ಉಳಿಯುವುದು

## – ಅಭ್ಯಾಸ –

ಅ) 'ಅ' ಪಟ್ಟಿಯಲ್ಲಿರುವ ಪದಗಳೊಂದಿಗೆ 'ಬ' ಪಟ್ಟಿಯಲ್ಲಿನ ಪದಗಳನ್ನು ಹೊಂದಿಸಿ ಬರೆಯಿರಿ:

| ಅ | ಬ | (ಸಾಲಿನ ಸಂಖ್ಯೆ) |
|---|---|---|
| ೧. ಹೂವು ಬಾಡುವ ಮುನ್ನ | ಬೇಗ ಹೆಜ್ಜೆಯ ಹಾಕು | .......... |
| ೨. ನಮ್ಮೂರ ತೇರಿಂದು | ನಮ್ಮೂರ ಸೇರೋಣ | .......... |
| ೩. ಹಿಡಿದ ಮಳೆ ಬಿಟ್ಟಿದೆ | ಬಂದು ಬಿಡುವರು | .......... |
| ೪. ಮಧ್ಯಾಹ್ನದೊಳಗಾಗಿ | ಬುತ್ತಿ ಬಿಚ್ಚುತ್ತಾರೆ | .......... |
| ೫. ದೇವರಿಗೆ ಕೈ ಮುಗಿದು | ಊರ ಸೇರಲೇಬೇಕು | .......... |
| | ಅದಕೆ ಹೋಗಲೇಬೇಕು | .......... |

ಆ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:

೧. ಹೂವು ಬಾಡುವ ಮುನ್ನ ಏನು ಮಾಡಬೇಕು?

೨. ಹೋಗಲೇಬೇಕಾದುದು ಎಲ್ಲಿಗೆ?

೩. ನಮ್ಮ ಊರನ್ನು ಯಾವಾಗ ಸೇರಬೇಕು?

೪. ಮರುಗ ಮಲ್ಲಿಗೆ ಜಾಜಿ ಎಲ್ಲಿ ರಾಶಿ ಬೀಳುವುದು?

೫. ಜಾತ್ರೆಗೆ ಬಂದವರು ಏನನ್ನು ಕೊಳ್ಳುತ್ತಾರೆ?

ಇ) ಈ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಬಳಸಿರಿ:

ಬಾಡು ..........................................................................

ಹೆಜ್ಜೆ ಹಾಕು ..........................................................................

ಒಳಗುಡಿ ..........................................................................

ಕೈಮುಗಿ ..........................................................................

ಅಗಲು ..........................................................................

**ಈ) ಬಿಟ್ಟ ಸ್ಥಳಗಳನ್ನು ಸೂಕ್ತ ಪದದಿಂದ ತುಂಬಿರಿ:**

೧) ತುಂಬ ಜನ ....................

೨) ದೇವರಿಗೆ ಕೈ .................... ಬಂದು ಬಿಡುವರು

೩) ಈ .................... ದೇವರನ್ನು .................... ಇಲ್ಲವೊ

೪) ವರುಷ ವರುಷವು .................... ಸೇರುವುದು ....................

೫) ಸ್ಮೃತಿ ಪಟಲದಲ್ಲೊಂದು .................... ನಿಲ್ಲುವುದು

**ಉ) ಈ ಪದಗಳ ಅರ್ಥವನ್ನು ಬರೆಯಿರಿ:**

೧) ಊರ ಸೇರು ..........................................

೨) ಬುತ್ತಿ ....................................................

೩) ಹೊರಟು ಹೋಗು ................................

೪) ಕೈ ಮುಗಿ ............................................

೫) ಜಾತ್ರೆ ..................................................

**ಊ) ಈ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧) ಜಾತ್ರೆಗೆ ಹೊರಟ ಸಂಸಾರವು ಅಲ್ಲಿಗೆ ಸೇರುವ ಬಗ್ಗೆ ಹೇಳುವ ಮಾತುಗಳೇನು?

೨) ದೇವಸ್ಥಾನದಲ್ಲಿ ಸ್ಥಿತಿ ಹೇಗೆ ಇರುತ್ತದೆ?

೩) ದೇವರಿಗೆ ಕೈ ಮುಗಿದು ಬಂದ ಮೇಲೆ ಜಾತ್ರೆಗೆ ಬಂದವರು ಏನು ಮಾಡುತ್ತಾರೆ?

೪) ಜಾತ್ರೆಗೆ ಬಂದು ಹೋಗುವ ಜನರ ಬಗ್ಗೆ ಕವಿಯ ಅಭಿಪ್ರಾಯವನ್ನು ಸಂಗ್ರಹಿಸಿ ಬರೆಯಿರಿ.



## – ಭಾಷಾಭ್ಯಾಸ –

**ಅ) ಈ ಪದಗಳ ರಚನೆಯನ್ನು ಗಮನಿಸಿರಿ. ಅವುಗಳನ್ನು ಮಾದರಿಯಂತೆ ಉಳಿದವನ್ನು ವಿಂಗಡಿಸಿ ಬರೆಯಿರಿ:**

ನಮ್ಮೂರು = ನಮ್ಮ + ಊರು (ಮಾದರಿ)

ತೇರಿಂದು =

ಪುರಿಯೊಡನೆ =

ವರ್ಷಕ್ಕೊಮ್ಮೆ =

ಹಾಡಾಗಿ =

ಆ) **ಈ ಪದಗಳನ್ನು ಬಿಡಿಸಿ ಮಾದರಿಯಂತೆ ಬರೆಯಿರಿ:**

*ಮಾದರಿ : ಬಾಡುವ = ಬ್+ಆ ಡ್+ಉ ವ್+ಅ*

ಮುನ್ನ, ನಮ್ಮೂರು, ಮಧ್ಯಾಹ್ನ

ಇ) **ಇವುಗಳಿಗೆ ತದ್ಭವಗಳನ್ನು ಬರೆಯಿರಿ:**

ವರ್ಷ, ಯಾತ್ರೆ, ಸಂತೋಷ, ಪುಸ್ತಕ, ಕಾರ್ಯ

ಈ) **ಈ ಸಾಲುಗಳಲ್ಲಿ ಬಂದಿರುವ ನಾಮಪದಗಳನ್ನು ಗುರುತಿಸಿರಿ:**

೧. ಹಿಡಿದ ಮಳೆ ಬಿಟ್ಟಿದೆ. ಬೇಗ ಹೆಜ್ಜೆಯ ಹಾಕು

೨. ತುಂಬ ಜನ ಸೇರುವರು, ಮರುಗ, ಮಲ್ಲಿಗೆ, ಜಾಜಿ

ಉ) **ಈ ಪದಗಳನ್ನು ಬಿಡಿಸಿ ಬರೆದು ವಿಭಕ್ತಿ ಪ್ರತ್ಯಯಗಳನ್ನು ತಿಳಿಸಿರಿ:**

ಊರ, ಅದಕೆ, ಅಂಗಡಿಯಲ್ಲಿ, ದೇವರನು, ಬಂಡಿಯ

## – ಚಟುವಟಿಕೆ –

೧) **ನಿಮ್ಮ ಊರಿನ / ನಿಮ್ಮ ಹತ್ತಿರದ ಊರಿನ ರಥೋತ್ಸವದ (ತೇರಿನ) ಬಗ್ಗೆ ಒಂದು ನಿಯೋಜಿತ ಪ್ರಬಂಧ (ಪ್ರಾಜೆಕ್ಟ್) ತಯಾರಿಸಿ. ಅದು ಈ ಅಂಶಗಳನ್ನು ಒಳಗೊಂಡಿರಲಿ. (ವಿಧಾನವನ್ನು ಶಿಕ್ಷಕರಿಂದ ತಿಳಿಯಿರಿ)**

(೧) ಊರಿನ ಹೆಸರು; (೨) ಜನಸಂಖ್ಯೆ; (೩) ಸ್ಥಳೀಯ ಜಾತ್ರೆಯ ಹೆಸರು; (೪) ಅಲ್ಲಿನ ದೇವರ / ದೇವಿಯ ಹೆಸರು; (೫) ರಥೋತ್ಸವದ ದಿನ; (೬) ಸ್ಥಳ ಪುರಾಣ; (೭) ಜಾತ್ರೆಯ ವಿವರ; (೮) ಜಾತ್ರೆಯ ವಿಶೇಷ.

**ಅಥವಾ**

೨) **ಶ್ರೀ ಕೆ.ಎಸ್. ನರಸಿಂಹಸ್ವಾಮಿ ಅವರ ಯಾವುದಾದರೂ ಎರಡು ಕವನಗಳನ್ನು ಸಂಗ್ರಹಿಸಿ ಅವುಗಳ ಅರ್ಥವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.**

☆ ☆ ☆ ☆ ☆

# ೧೨. ಹಾಡು ಹಕ್ಕಿ – ಸುಕ್ರಿ ಬೊಮ್ಮಗೌಡ (ಗದ್ಯ)

ಕರ್ನಾಟಕದಲ್ಲಿ 'ಹಾಲಕ್ಕಿ ಒಕ್ಕಲಿಗರು' ಎಂಬ ಬುಡಕಟ್ಟು ಜನಾಂಗವಿದೆ. ಕೃಷಿಕೂಲಿ, ಕುಮ್ರಿ ಬೇಸಾಯ ಇವರ ವೃತ್ತಿ. ಆರ್ಥಿಕವಾಗಿ ಹಿಂದುಳಿದವರು. ಆದರೂ ತಮ್ಮ ಶ್ರೀಮಂತ ಕಲೆ, ಸಂಸ್ಕೃತಿ, ವಿಶಿಷ್ಟ ವೇಷಭೂಷಣಗಳಿಂದ ಗಮನ ಸೆಳೆಯುತ್ತಾರೆ. ಹೆಸರಾಂತ ಜನಪದ ಹಾಡುಗಾರ್ತಿ ಸುಕ್ರಿ ಬೊಮ್ಮಗೌಡ ಹಾಲಕ್ಕಿ ಜನಾಂಗದಲ್ಲಿ ಹುಟ್ಟಿದ ಮಹಿಳೆ. ಇವರು ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲೂಕಿನ ಬಡಗೇರಿ ಗ್ರಾಮದ ಬೊಮ್ಮಗೌಡನ ಹೆಂಡತಿ. ಅದೇ ತಾಲೂಕಿನ ಅಂಬಾರಕೊಲ್ಲಿನ ಶಿರುಗಲಿಯ ದೇವಮ್ಮನ ಮಗಳು. ನಲವತ್ತೈದರ ಪ್ರಾಯದಲ್ಲಿರುವ ಇವರು ಹನ್ನೆರಡನೇ ವಯಸ್ಸಿಗೆ ಮದುವೆಯಾಗಿ ಕೆಲವೇ ವರ್ಷಗಳಲ್ಲಿ ವಿಧವೆಯಾದರು. ಹಾಲಕ್ಕಿ ಸಮುದಾಯದಲ್ಲಿ ಪುನರ್ವಿವಾಹ ಪದ್ಧತಿಯಿದ್ದರೂ ಸುಕ್ರಿ ಮತ್ತೆ ಮದುವೆಯಾಗಲಿಲ್ಲ. ಈಗಲೂ ಕೃಷಿಕೂಲಿ ಮಾಡುತ್ತ, ಸ್ವತಂತ್ರವಾಗಿ ಕ್ರಿಯಾಶೀಲ ಜೀವನ ನಡೆಸುತ್ತಿದ್ದಾರೆ. ಹಾಡು ಅವರ ಉಸಿರಾಗಿದೆ.





ಸುಕ್ರಿ ಶಾಲೆಗೆ ಹೋಗಿ ಓದುಬರಹ ಕಲಿತವರಲ್ಲ. ಆದರೆ ಹಾಡುವ ಕಲೆ ಅವರಿಗೆ ದೈವದತ್ತ. ಬಾಲ್ಯದಲ್ಲಿಯೇ ತಾಯಿಯಿಂದ ಕಥನ ಗೀತ, ಸಂಪ್ರದಾಯದ ಹಾಡುಗಳು, ಜೋಗುಳ ಪದಗಳನ್ನು ಕೇಳಿ ಕಲಿತಿರುವ ಸುಕ್ರಿ ಮೌಖಿಕ ಪರಂಪರೆಯ ಅಸಾಮಾನ್ಯ ಪ್ರತಿಭೆ. ಇತರರು ಹಾಡಿದ್ದನ್ನು ನೆನಪಿಟ್ಟುಕೊಂಡು ಹಾಡಬಲ್ಲರು. ಅಷ್ಟೇ ಅಲ್ಲ, ತಾನೇ ಹಾಡುಕಟ್ಟಿ ಹಾಡಬಲ್ಲ ಸಾಮರ್ಥ್ಯವೂ ಇವರಿಗಿದೆ. ಹಾಲಕ್ಕಿ ಒಕ್ಕಲಿಗರು ಆಚರಿಸುವ ಸುಗ್ಗಿ ಹಬ್ಬ, ತುಳಸಿಹಬ್ಬ, ದೀಪಾವಳಿ ಹಬ್ಬ ಇತ್ಯಾದಿ ಆಚರಣೆಗಳ ಬಗ್ಗೆ ಸುಕ್ರಿಯ ಹಾಡುಗಳಲ್ಲಿ ಮಹತ್ವದ ಮಾಹಿತಿಗಳು ದೊರೆಯುತ್ತವೆ. ಜನಪದ ರಾಮಾಯಣ, ಮಹಾಭಾರತಗಳ ವಿವಿಧ ಸನ್ನಿವೇಶಗಳು, ಮಾದೇವರಾಯ, ಚಂದನರಾಯ, ಬಲೀಂದ್ರರಾಯ, ಸಿರಿಕವುಲಿ, ತಂಗಿ ತುಳಸಮ್ಮ ಇತ್ಯಾದಿ ಸುದೀರ್ಘ ಕಥನ ಗೀತೆಗಳನ್ನು ಸುಕ್ರಿ ಹಗಲು–ಇರುಳು ಎನ್ನದೇ ಸುಶ್ರಾವ್ಯವಾಗಿ ಹಾಡಬಲ್ಲರು.

ಮಳೆ ಬಾರದಿದ್ದಾಗ, ಹಾಲಕ್ಕಿ ಒಕ್ಕಲಗಿತ್ತಿಯರು ಸಾಮೂಹಿಕವಾಗಿ ಕುಣಿಯುವ 'ಕಾರ್ಲೆ ಕುಣಿತ', ಗಂಡು–ಹೆಣ್ಣು ಮಕ್ಕಳು ಕೂಡಿ ಆಡುವ ಮದುವೆ ಆಟದಲ್ಲಿ ಹೇಳುವ 'ಬೆದ್ರುಂಡೆ ಪದ' ಇಂದು ಕಡಿಮೆಯಾಗುತ್ತಿವೆ. ಆದರೆ ಸುಕ್ರಿ ಈ ಎರಡೂ ಕಲೆಗಳನ್ನು ಉಳಿಸಿಕೊಂಡಿರುವ ಅದ್ಭುತವಾದ ಜಾನಪದ ಭಂಡಾರ.

ಸುಕ್ರಿ ಬೊಮ್ಮಗೌಡರು ತಮ್ಮ ವಿಶಿಷ್ಟವಾದ ಹಾಡುಗಾರಿಕೆಯಿಂದ ನಾಡಿನ ಜನಮನ ಗೆದ್ದಿದ್ದಾರೆ. ಅನೇಕ ಸಭೆ ಸಮಾರಂಭಗಳಲ್ಲಿ ಕಲೆ, ಕಲಾವಿದರ ಪ್ರಗತಿಗಾಗಿ ತುಂಬ ಕಾಳಜಿಯಿಂದ, ಕಳಕಳಿಯಿಂದ ಮಾತನಾಡುತ್ತಾರೆ. ಅನೇಕ ಸಂಘ ಸಂಸ್ಥೆಗಳು ಅವರ ಪ್ರತಿಭೆಯನ್ನು ಗುರುತಿಸಿ, ಸನ್ಮಾನಿಸಿವೆ. ಕರ್ನಾಟಕ ಸರ್ಕಾರ ೧೯೯೯ರಲ್ಲಿ ಅವರಿಗೆ ಜಾನಪದಶ್ರೀ ಪ್ರಶಸ್ತಿ ನೀಡಿ ಗೌರವಿಸಿತು.

ಸುಕ್ರಿ ಬೊಮ್ಮಗೌಡ ಜಾನಪದ ಹಾಡುಗಾರ್ತಿ ಮಾತ್ರವಲ್ಲ; ಸಾಮಾಜಿಕ ಕಳಕಳಿ ಇರುವ ದಿಟ್ಟ, ಸ್ವಾಭಿಮಾನಿ ಮಹಿಳೆ. ದಿ॥ ಕುಸುಮಾ ಸೊರಬ ಅವರ ಮಾರ್ಗದರ್ಶನದಲ್ಲಿ ಹಾಲಕ್ಕಿ ಒಕ್ಕಲಿಗ ಮಹಿಳೆಯರನ್ನೆಲ್ಲ ಒಗ್ಗೂಡಿಸಿ ಅಂಕೋಲಾ, ಕಾರವಾರ, ಸಿರ್ಸಿ ಹಾಗೂ ಬೆಳಗಾವಿ ಜಿಲ್ಲಾಧಿಕಾರಿಗಳ ಮುಂದೆ ಇವರು ನಡೆಸಿದ ಧರಣಿ ಐತಿಹಾಸಿಕ ದಾಖಲೆ. ಮದ್ಯಪಾನದ ವಿರುದ್ಧ ಹೋರಾಡಿ, ತನ್ನ ಊರನ್ನು ಆ ದುಶ್ಚಟದಿಂದ ದೂರವಿಟ್ಟಿದ್ದಾರೆ. ಪರಿಸರ ನಾಶ, ಸಾಮಾಜಿಕ ಅಸಮಾನತೆ ವಿರುದ್ಧ ತನ್ನ ಸಮಾಜದವರೊಂದಿಗೆ ದನಿ ಎತ್ತಿದ್ದಾರೆ. ಕೊಂಕಣ ರೈಲು ಹಾಲಕ್ಕಿಗಳ ಬದುಕಿಗೆ ಹೊಸತೇನನ್ನೂ ತರಲಿಲ್ಲ. ಇದರಿಂದ ತನ್ನ ಜನಾಂಗ ನಂಬಿದ ಭೂಮಿಯನ್ನೇ ಕಳೆದುಕೊಂಡ ಬಗ್ಗೆ ಅವರಿಗೆ ತೀವ್ರ ಬೇಸರವಿದೆ. ತನ್ನ ಸುತ್ತಣ ಅರಣ್ಯ ನಾಶವಾಗಿ, ಈಗ ಅಕೇಶಿಯಾ ಬೆಳೆಯುತ್ತಿರುವ ಬಗ್ಗೆ ಸುಕ್ರಿಗೆ ನೋವಿದೆ.

ಪ್ರತಿಯೊಂದನ್ನು ತನ್ನ ಹಾಡಿನ ಮೂಲಕವೇ ಹೇಳುವ ಸುಕ್ರಿ ಸ್ವತಂತ್ರ ವಿಚಾರದ, ಸ್ವತಂತ್ರ ಬದುಕಿನ ಹಾಡುಹಕ್ಕಿ. ಹಾಲಕ್ಕಿ ಜನಾಂಗದ ಹೆಮ್ಮೆ. ನಮ್ಮ ನಾಡಿನ ಬುಡಕಟ್ಟುಗಳಲ್ಲಿ ಅಡಗಿರುವ ನಮ್ಮ ಸಂಸ್ಕೃತಿಯ ವಿಚಾರಗಳನ್ನು ಇಂದೂ ನಮ್ಮ ಕಿವಿಗಳಿಗೆ ಕೇಳಿಸುತ್ತಿರುವ ಸುಕ್ರಿ ಬಹುಮುಖೀ ಸಂಸ್ಕೃತಿಯ ಹರಿಕಾರರೂ ಹೌದು.



## – ಓದಿ ತಿಳಿಯಿರಿ –

| | | | |
|---|---|---|---|
| ಬುಡಕಟ್ಟು | – ಮೂಲ ಜನಾಂಗ | ಪ್ರಗತಿ | – ಅಭಿವೃದ್ಧಿ |
| ಆರ್ಥಿಕ | – ಹಣಕಾಸಿನ ಸ್ಥಿತಿ | ದಿಟ್ಟ | – ಧೈರ್ಯಮನೋಭಾವದ |
| ಸ್ವಾಭಿಮಾನಿ | – ಆತ್ಮಗೌರವವುಳ್ಳ | ವಿಧವೆ | – ಗಂಡನನ್ನು ಕಳೆದುಕೊಂಡವಳು |
| ಪುನರ್ವಿವಾಹ | – ಮರುಮದುವೆ | ಒಗ್ಗೂಡು | – ಒಂದಾಗಿ ಸೇರು |
| ನೆಮ್ಮದಿ | – ಸಮಾಧಾನ, ಸಂತೋಷ | ಧರಣಿ | – ಸತ್ಯಾಗ್ರಹ, ಪ್ರತಿಭಟನೆ |
| ದುಶ್ಚಟ | – ಕೆಟ್ಟ ಚಟ | ಸುದೀರ್ಘ | – ಬಹುದೊಡ್ಡ ಕಾಲದ |
| ಮಾಹಿತಿ | – ವಿಷಯ | ಅಸಮಾನತೆ | – ಸರಿಸಮ ಇಲ್ಲದಿರುವುದು |
| ಸುಶ್ರಾವ್ಯ | – ಸುಮಧುರ, ಇಂಪಾದ | ತೀವ್ರ | – ಹೆಚ್ಚಾದ, ಉಗ್ರ |
| ಸನ್ನಿವೇಶ | – ಸಂದರ್ಭ | ಅರಣ್ಯ | – ಕಾಡು |
| ಅದ್ಭುತ | – ಅತಿ ಆಶ್ಚರ್ಯಕರ | ವಿಶಿಷ್ಟ | – ವಿಶೇಷವಾದ |
| ಮಹತ್ವ | – ಪ್ರಾಮುಖ್ಯತೆ | ದೈವದತ್ತ | – ದೇವರಿಂದ ಕೊಡಲ್ಪಟ್ಟ |

## – ಗಮನಿಸಿರಿ –

| | | |
|---|---|---|
| ಕುಮ್ರಿ ಬೇಸಾಯ | – | ಕಾಡನ್ನು ಕೈಯಿಂದಲೇ ಕಡಿದು ಸಾಗುವಳಿ ಮಾಡುವುದು |
| ಕಥನ ಗೀತೆ | – | ಕಥೆಯನ್ನೊಳಗೊಂಡ ಪದ್ಯಕಾವ್ಯ |
| ಜೋಗುಳ | – | ಮಕ್ಕಳನ್ನು ಮಲಗಿಸುವಾಗ ಹೇಳುವ ಲಾಲಿ ಹಾಡು |
| ಮೌಖಿಕ ಪರಂಪರೆ | – | ಬರವಣಿಗೆಯ ನೆರವಿಲ್ಲದೆ, ಬಾಯಿಂದ ಬಾಯಿಗೆ ಹರಡಿದ ಸಂಸ್ಕೃತಿ |
| ಕಾರ್ಲೆ ಕುಣಿತ | – | ಮಳೆ ಬಾರದಿದ್ದಾಗ ಹಾಲಕ್ಕಿ ಒಕ್ಕಲಗಿತ್ತಿಯರು ಮಳೆಗಾಗಿ ದೇವರನ್ನು ಪ್ರಾರ್ಥಿಸುವ ವಿಶಿಷ್ಟ ನರ್ತನ |
| ಬೆದ್ರುಂಡೆ ಪದ | – | ಹಾಲಕ್ಕಿ ಒಕ್ಕಲಗಿತ್ತಿಯರು ಹೇಳುವ ಮದುವೆ ಆಟದ ಹಾಡು |
| ಜಾನಪದ ಭಂಡಾರ | – | ಜಾನಪದ ಕಲೆಯ ಸಂಗ್ರಹ |
| ಸಾಮಾಜಿಕ ಕಳಕಳಿ | – | ಸಮಾಜದ ಬಗ್ಗೆ ಇರುವ ಕಾಳಜಿ |
| ಸಾಮಾಜಿಕ ಅಸಮಾನತೆ | – | ಬಡವ–ಬಲ್ಲಿದ, ಮೇಲು–ಕೀಳು, ವಿದ್ಯಾವಂತ–ಅವಿದ್ಯಾವಂತ ಮುಂತಾದ ವ್ಯತ್ಯಾಸಗಳಿಂದಾಗಿ ಸಮಾನತೆ ಇಲ್ಲದಿರುವ ಸಮಾಜದ ಸ್ಥಿತಿ |
| ಹಾಡು ಹಕ್ಕಿ | – | ಕೋಗಿಲೆ ಮುಂತಾದ ವಿಶಿಷ್ಟ ಹಕ್ಕಿಗಳನ್ನು ಹಾಡುವ ಹಕ್ಕಿಗಳೆಂದು ಗುರುತಿಸುತ್ತೇವೆ. |
| ಹಾಡುಕಟ್ಟು | – | ಸ್ವತಂತ್ರವಾಗಿ ಹಾಡನ್ನು ರಚಿಸುವುದು. |



## – ಅಭ್ಯಾಸ –

**ಅ. 'ಅ' ಪಟ್ಟಿಯಲ್ಲಿರುವ ಪದಗಳೊಂದಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ:**

| ಅ | ಬ |
|---|---|
| ೧. ಬುಡಕಟ್ಟು | ೧. ಜಾನಪದ ಕಲೆಯ ವಿಚಾರಗಳ ಸಂಗ್ರಹ |
| ೨. ದೈವದತ್ತ | ೨. ವಿಶೇಷ ಜಾನಪದ ಕಲೆಯ ಸಾಧನೆಗಾಗಿ ಸರ್ಕಾರ ನೀಡುವ ಪುರಸ್ಕಾರ |
| ೩. ಹಾಡುಹಕ್ಕಿ | ೩. ಮೂಲ ನಿವಾಸಿ |
| ೪. ಜಾನಪದ ಭಂಡಾರ | ೪. ಕಾಡಿನಲ್ಲಿ ಸ್ವತಂತ್ರವಾಗಿ ಕೂಗುವ ಹಕ್ಕಿಗಳು |
| ೫. ಜಾನಪದಶ್ರೀ | ೫. ಹುಟ್ಟಿನಿಂದಲೇ ಬಂದ ಕಲೆ |
| | ೬. ಕಾರ್ಲೆ ಕುಣಿತ |

**ಆ. ಖಾಲಿ ಬಿಟ್ಟ ಸ್ಥಳಗಳನ್ನು ಆವರಣದಲ್ಲಿರುವ ಸೂಕ್ತ ಪದದಿಂದ ತುಂಬಿರಿ:**

೧. ಹಾಲಕ್ಕಿ ಜನಾಂಗ ಕರ್ನಾಟಕದ ಒಂದು _______ ಜನಾಂಗ
(ಬುಡಕಟ್ಟು, ಸಿರಿವಂತ, ಗ್ರಾಮೀಣ ರಾಜವಂಶ)

೨. ಬೊಮ್ಮಗೌಡ ಸುಕ್ರಿಯ _________ (ಮಾವ, ಗಂಡ, ಅಳಿಯ, ಅಣ್ಣ)

೩. ಸುಕ್ರಿ __________ ಪರಂಪರೆಯ ಅಸಾಮಾನ್ಯ ಪ್ರತಿಭೆ (ಸಾಹಿತ್ಯ, ಮೌಖಿಕ, ಕಲಾ, ನಾಟ್ಯ)

೪. ಸುಕ್ರಿ ಬೊಮ್ಮಗೌಡ ತನ್ನ ಊರನ್ನು _______ ಚಟದಿಂದ ದೂರವಿಟ್ಟಿದ್ದಾಳೆ
(ಮದ್ಯಪಾನ, ಧೂಮಪಾನ, ಜೂಜಾಟ)

**ಇ. ಸರಿಯೇ? ತಪ್ಪೇ? ತಿಳಿಸಿರಿ ತಪ್ಪಿದ್ದರೆ ತಿದ್ದಿ ಬರೆಯಿರಿ.**

೧. ಸುಕ್ರಿ ಶಾಲೆಯಲ್ಲಿ ಓದು ಬರಹ ಕಲಿತವರು

೨. ತಾನೇ ಹಾಡುಕಟ್ಟಿ ಹಾಡಬಲ್ಲ ಸಾಮರ್ಥ್ಯ ಸುಕ್ರಿಗಿದೆ.

೩. ಸುಕ್ರಿ ಗಂಡ ಸತ್ತ ನಂತರ ಮತ್ತೆ ಮದುವೆಯಾದರು.

೪. ಸುಕ್ರಿ ಬೊಮ್ಮಗೌಡ ಸಾಮಾಜಿಕ ಕಳಕಳಿ ಇರುವ ದಿಟ್ಟ ಮಹಿಳೆ

೫. ಕರ್ನಾಟಕ ಸರ್ಕಾರ ಸುಕ್ರಿ ಬೊಮ್ಮಗೌಡರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿದೆ.

**ಈ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಸುಕ್ರಿ ಬೊಮ್ಮಗೌಡ ಯಾವ ಜನಾಂಗದಲ್ಲಿ ಜನಿಸಿದರು?

೨. ಸುಕ್ರಿ ತಾಯಿಯಿಂದ ಏನೇನು ಕಲಿತರು?

೩. ಹಾಲಕ್ಕಿ ಒಕ್ಕಲಿಗರ ಹಬ್ಬಗಳು ಯಾವುವು?

೪. 'ಕಾರ್ಲೆ ಕುಣಿತ'ವನ್ನು ಯಾವಾಗ ಆಚರಿಸುತ್ತಾರೆ?

೫. 'ಬೆದ್ರುಂಡೆಪದ' ಎಂದರೇನು?

೬. ಕರ್ನಾಟಕ ಸರ್ಕಾರ ಸುಕ್ರಿಗೆ ಯಾವ ಪ್ರಶಸ್ತಿ ನೀಡಿದೆ?

**ಉ. ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಹಾಲಕ್ಕಿ ಒಕ್ಕಲಿಗರು ಹೇಗೆ ಗಮನ ಸೆಳೆಯುತ್ತಾರೆ?

೨. ಸುಕ್ರಿ ಯಾವ ಎರಡು ಕಲೆಗಳನ್ನು ಉಳಿಸಿ ಕೊಂಡು ಬಂದಿದ್ದಾರೆ?

೩. ಸುಕ್ರಿ ಸಾಮಾಜಿಕ ಕಳಕಳಿ ಹೊಂದಿರುವ ವ್ಯಕ್ತಿ ಎಂದು ಹೇಗೆ ಹೇಳಬಹುದು?

೩. ಸುಕ್ರಿಗೆ ಯಾವುದರ ಬಗ್ಗೆ ತೀವ್ರ ಬೇಸರವಿದೆ?

ಊ. ಈ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಬಳಸಿರಿ:

ಎಳೆವಯಸ್ಸು, ಪುನರ್ವಿವಾಹ, ಆಚರಣೆ, ಮಾಹಿತಿ, ಹಾಡುಹಕ್ಕಿ, ಸ್ವತಂತ್ರ, ಕಾಳಜಿ, ಕಳಕಳಿ

ಋ. ಸಮಾನ ಅರ್ಥ ಕೊಡುವ ನಾಲ್ಕು ಪದಗಳನ್ನು ಬರೆಯಿರಿ:

೧. ಕೃಷಿ .......... .......... .......... ..........

೨. ವಿವಾಹ .......... .......... .......... ..........

೩. ಹಕ್ಕಿ .......... .......... .......... ..........

೪. ನೆಮ್ಮದಿ .......... .......... .......... ..........

ಎ. ಈ ಪದಗಳಲ್ಲಿ ಬಿಟ್ಟ ಅಕ್ಷರವನ್ನು ಗುರುತಿಸಿರಿ:

ಹಾಡು____ಕ್ಕಿ ಧ____ಣಿ ಅ____ಮಾನತೆ

ಹರಿ____ರ ಸ್ವಾಭಿಮಾ____ ಉದ್ಯಾ____ಸು

ಏ. ಈ ಪದಗಳನ್ನು ಮಾದರಿಯಂತೆ ಸೇರಿಸಿ ಬರೆಯಿರಿ:

*ಮಾದರಿ : ಮದುವೆ + ಆಗಿ = ಮದುವೆಯಾಗಿ*

೧. ನೆಮ್ಮದಿ + ಇಂದ =

೨. ಕಲಾವಿದೆ + ಆಗಿ =

೩. ದೂರ + ಇಟ್ಟಿದ್ದಾಳೆ =

## – ಭಾಷಾಭ್ಯಾಸ –

| | |
|---|---|
| ಕಮಲೆಯು ಶಾಲೆಗೆ ಹೋದಳು. | (ಸರಳ ವಾಕ್ಯ) |
| ರಾಜೀವನು ಇಂದು ಏಕೆ ಶಾಲೆಗೆ ಹೋಗಲಿಲ್ಲ? | (ಪ್ರಶ್ನಾರ್ಥಕ ವಾಕ್ಯ) |
| ಅಯ್ಯೋ! ಅವನು ಬಿದ್ದೇ ಬಿಟ್ಟ! | (ಭಾವಸೂಚಕ – ದುಃಖ, ಸಂತೋಷ, ಆಶ್ಚರ್ಯ ಹೀಗೆ ಭಾವಗಳನ್ನು ಸೂಚಿಸುವ ವಾಕ್ಯ) |
| ನಾಳೆ ಈ ಕೆಲಸವನ್ನು ನೀನು ಮುಗಿಸಿರಲೇಬೇಕು. | (ವಿಧ್ಯರ್ಥಕ ವಾಕ್ಯ) |
| ಈ ಮರದಲ್ಲಿ ಹಣ್ಣುಗಳೇ ಇಲ್ಲ. | (ನಿಷೇಧಾರ್ಥಕ ವಾಕ್ಯ) |
| ಸುರೇಶನಿಗೆ ಜ್ವರ ಬಂದಿದ್ದರಿಂದ ಅವನು ಸಭೆಗೆ ಹೋಗಿರಲಿಕ್ಕಿಲ್ಲ | (ಸಂಯುಕ್ತ ವಾಕ್ಯ) |
| ಹೆಚ್ಚು ಮಳೆ ಸುರಿಯಿತು, ಊರೆಲ್ಲ ಕೊಚ್ಚಿಹೋಯಿತು. | (ಮಿಶ್ರವಾಕ್ಯ) |

ಹೀಗೆ ಪೂರ್ಣಾರ್ಥವನ್ನು ಕೊಡುವ ಪದಗಳ ಸಮೂಹವನ್ನು ವಾಕ್ಯವೆಂದು ಹೇಳುತ್ತಾರೆ. ಒಂದು ವಾಕ್ಯದಲ್ಲಿ ಕರ್ತೃಪದ. ಕರ್ಮಪದ, ಕ್ರಿಯಾಪದಗಳಲ್ಲದೇ ಬೇರೆ ಬೇರೆ ರೀತಿಯ ಪದಗಳು ಇರಬಹುದು. ಪೂರ್ಣಾರ್ಥ ಪಡೆಯುವ ಸಲುವಾಗಿ ಕರ್ತೃಪದ ಹಾಗೂ ಕ್ರಿಯಾ ಪದಗಳು ಇರಲೇಬೇಕು.

## – ಚಟುವಟಿಕೆ –

**ಅ. ಕೆಲವು ಪಕ್ಷಿಗಳ ಹೆಸರನ್ನು ಪಟ್ಟಿ ಮಾಡಿ, ಅವುಗಳ ಧ್ವನಿಯನ್ನು ಅನುಕರಣೆ ಮಾಡಿರಿ.**

**ಆ. ಸಂಪ್ರದಾಯದ ಹಾಡುಗಳನ್ನು ಮತ್ತು ಜೋಗುಳದ ಹಾಡುಗಳನ್ನು ಹಾಡಿರಿ.**

**ಇ. ಈ ವಾಕ್ಯಗಳಲ್ಲಿ ಕ್ರಿಯಾಪದ, ನಾಮಪದ, ಗುಣವಾಚಕಗಳನ್ನು ಗುರುತಿಸಿ:**

೧. ಸುಕ್ರಿ ಬೊಮ್ಮಗೌಡರು ಸುಶ್ರಾವ್ಯವಾಗಿ ಕಥನ ಗೀತಗಳನ್ನು ಹಾಡುತ್ತಾರೆ.

೨. ನಾಡಿನ ಅನೇಕ ವೇದಿಕೆಗಳಲ್ಲಿ ಸುಕ್ರಿ ಹಾಡಿದ್ದಾರೆ.

೩. ರಾಧೆಯು ಚೆನ್ನಾಗಿ ಓದಿ, ತರಗತಿಗೇ ಮೊದಲನೆಯವಳಾದಳು.

೪. ಭಾರತೀಯರು ಬ್ರಿಟಿಷರ ವಿರುದ್ಧ ಒಗ್ಗಟ್ಟಾಗಿ ಹೋರಾಡಿದರು.

**ಈ. ಕೆಳಗಿನ ವಾಕ್ಯವೃಂದವನ್ನು ಇಬ್ಬರ ಸಂಭಾಷಣೆ ರೂಪದಲ್ಲಿ ಬರೆಯಿರಿ:**

ಒಂದು ನಾಯಿಮರಿ ಇದ್ದಿತು. ಅದರ ಯಜಮಾನ ನಾಯಿಮರಿಗೆ ತಿಂಡಿ ಬೇಕೇ ಎಂದು ಕೇಳಿದ. ಆಗ ನಾಯಿಮರಿಯು ನನಗೆ ತಿಂಡಿ–ತೀರ್ಥ ಎಲ್ಲವೂ ಬೇಕು ಎಂದು ಹೇಳಿತು. ಯಜಮಾನನು ನಾಯಿಮರಿ ತಿಂಡಿ ತಿಂದು ಏನು ಮಾಡುತ್ತದೆ ಎಂದು ತಿಳಿಯಲು ಇಷ್ಟಪಟ್ಟನು. ಆಗ ನಾಯಿಮರಿಯು ತಿಂಡಿ ತಿಂದು ತಾನು ಮನೆಯನ್ನು ಕಾಯುವುದಾಗಿ ಹೇಳಿತು. ಆಗ ಯಜಮಾನನು ತಾನು ತಿಂಡಿ ತರುವುದಾಗಿ ಹೇಳಿ ಹೊರಟನು. ಯಜಮಾನನು ಬರುವವರೆಗೂ ತಾನು ಮನೆಯನ್ನು ಕಾಯುತ್ತಿರುವುದಾಗಿ ನಾಯಿಮರಿಯು ಭರವಸೆಯನ್ನು ನೀಡಿತು.

☆ ☆ ☆ ☆ ☆

# ೧೩. ಹಕ್ಕಿಗಳು (ಪದ್ಯ)

– ಡಾ॥ ಸಿದ್ಧಲಿಂಗಯ್ಯ



ಬೆಟ್ಟವ ಹತ್ತಿ ಬೆಟ್ಟವ ಇಳಿಯುವ
ಬಾಲಕರಣ್ಣ ನಾವುಗಳು
ಆಳ ಪಾತಾಳದ ಕರಾಳ ನೋವನು
ಕಂಡವರಣ್ಣಾ ನಾವುಗಳು
ಕುರಿಗಳ ಕಾಯ್ದು ದನಗಳ ಮೇಯಿಸಿ
ಹಾಲನು ಕುಡಿಯದೆ ಹೋದವರು
ಓದುವ ಬರೆಯುವ ಭಾಗ್ಯವು ಸಿಗದೆ
ಗಿಡಗಳ ಜೊತೆಯಲಿ ಬೆಳೆದವರು
ಎಂಜಲು ತೊಳೆದು ಗಂಜಲ ಬಳಿದು
ಗಂಜಿಯ ಕಾಣದೆ ದುಡಿದವರು
ಗುಡಿಗೋಪುರದ ಬಣ್ಣಗಳಾಗಿ
ಚಳಿಯನು ತಡೆಯದೆ ಕುಸಿದವರು

ಉರಿಬಿಸಿಲಲ್ಲಿ ಉರಿಯುವ ಎಲೆಗಳು
ಬೂದಿಯ ಕಣಗಳು ನಾವುಗಳು
ಬಿರಿಯುವ ಮೊದಲೇ ಬಾಡುವ ಹೂಗಳು
ಕಮರುವ ಬಣ್ಣದ ಕನಸುಗಳು
ಹೊತ್ತನು ಅರಿಯದ ದಿಕ್ಕನು ಕಾಣದ
ಸೀಳುದಾರಿಯ ಪಯಣಿಗರು
ನೋವಿನ ಹಾಡಿನ ಕತ್ತಲ ನಾಡಿನ
ಬೆಳಕನು ಅರಸುವ ಹಕ್ಕಿಗಳು



## ಕೃತಿ–ಕರ್ತೃ ಪರಿಚಯ



ದಲಿತ ಕವಿಯೆಂದೇ ನಾಡಿನಾದ್ಯಂತ ಪ್ರಸಿದ್ಧರಾಗಿರುವ ಡಾ.ಸಿದ್ಧಲಿಂಗಯ್ಯನವರು (ಜನನ: ೧೯೫೪). ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿಯವರು. (ಈಗಿನ ರಾಮನಗರ ಜಿಲ್ಲೆ). ಇವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ, ವಿಶ್ವವಿದ್ಯಾಲಯದ ಕಲಾನಿಕಾಯದಲ್ಲಿ 'ಡೀನ್' ಆಗಿ ಸೇವೆ ಸಲ್ಲಿಸಿದ್ದಾರೆ. ದಲಿತರ ದುಃಖ ದುಮ್ಮಾನಗಳಿಗೆ ಧ್ವನಿಯಾಗಿದ್ದಾರೆ. 'ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಕಪ್ಪುಕಾಡಿನ ನಾಡು' ಇವು ಇವರ ಪ್ರಸಿದ್ಧ ಕವನ ಸಂಕಲನಗಳು. 'ಮೆರವಣಿಗೆ' ಸಮಗ್ರ ಕವನ ಸಂಗ್ರಹ. 'ಅವತಾರಗಳು, ಗ್ರಾಮದೇವತೆಗಳು, ಹಕ್ಕಿನೋಟ'

ಇವರ ಗದ್ಯ ಕೃತಿಗಳು. 'ಪಂಚಮ, ನೆಲಸಮ, ಏಕಲವ್ಯ' ನಾಟಕಗಳು. 'ಊರುಕೇರಿ' ಇವರ ವಿಶಿಷ್ಟ ರೀತಿಯ ಆತ್ಮಕಥನ. ಎರಡು ಬಾರಿ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿ, ಪ್ರಸ್ತುತ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. 'ಹಕ್ಕಿಗಳು' ಕವನವನ್ನು ಅವರ 'ಮೆರವಣಿಗೆ' ಕೃತಿಯಿಂದ ಆಯ್ಕೆಮಾಡಲಾಗಿದೆ. ರಾಜ್ಯೋತ್ಸವ ಪ್ರಶಸ್ತಿ, ಡಾ॥ ಅಂಬೇಡ್ಕರ್ ಶತಮಾನೋತ್ಸವ ವಿಶೇಷ ಬಹುಮಾನ, ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಮತ್ತು ಸಂದೇಶ ಪ್ರಶಸ್ತಿ ಅವರಿಗೆ ಸಂದಾಯವಾಗಿದೆ.

## – ಓದಿ ತಿಳಿಯಿರಿ –

ಗಂಜಲ – ಗೋಮೂತ್ರ
ಬಿರಿ – ಅರಳು, ಬಿರುಕು
ಕಮರು – ಕುಂದು, ನಾಶಹೊಂದು
ಅರಿ – ತಿಳಿ, ಶತ್ರು
ಅರಸು – ಹುಡುಕು, ಶೋಧಿಸು
ಕುಸಿದು – ಆಯಾಸದಿಂದ ಕೂರುವುದು
ಬಾಡು – ಒಣಗು
ಹೊತ್ತು – ಸಮಯ
ಸೀಳುದಾರಿ – ಕವಲು ದಾರಿ

## – ಈ ಸಾಲುಗಳ ಭಾವತೀವ್ರತೆ ಗಮನಿಸಿರಿ –

ಆಳ ಪಾತಾಳದ ಕರಾಳ ನೋವು
ಗಿಡಗಳ ಜೊತೆಯಲಿ ಬೆಳೆದವರು
ಗುಡಿಗೋಪುರದ ಬಣ್ಣಗಳಾಗಿ
ಕಮರುವ ಬಣ್ಣದ ಕನಸುಗಳು
ಸೀಳುದಾರಿಯ ಪಯಣಿಗರು
ಬೆಳಕನು ಅರಸುವ ಹಕ್ಕಿಗಳು

## – ಅಭ್ಯಾಸ –

**ಅ) ಹೊಂದಿಸಿ ಬರೆಯಿರಿ:**

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ೧. ಬಿರಿ | ಅ) ಸಮಯ |
| ೨. ಊರು ಕೇರಿ | ಆ) ಪಯಣ |
| ೩. ಹಕ್ಕಿಗಳು | ಇ) ಅರಳು |
| ೪. ಸೀಳು | ಈ) ಆತ್ಮಕಥನ |
| ೫. ಪ್ರಯಾಣ | ಉ) ಕವಲು |
| | ಊ) ಮೆರವಣಿಗೆ |

ಆ) **ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ:**

೧. ಬೂದಿಯ ________ ನಾವುಗಳು

೨. ಗಿಡಗಳ ________ ಬೆಳೆದವರು

೩. ಹಾಲನು ________ ಹೋದವರು

೪. ಬೆಳಕನು ________ ಹಕ್ಕಿಗಳು

೫. ಗಂಜಿಯ ________ ದುಡಿದವರು

ಇ) **ಮೊದಲೆರಡು ಪದಗಳಿಗೆ ಸಂಬಂಧಿಸಿದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದವನ್ನು ಬರೆಯಿರಿ:**

೧. ಕುರಿಗಳ – ಕಾಯ್ದು :: ದನಗಳ –

೨. ಎಂಜಲ – ತೊಳೆದು :: ಗಂಜಿಯ –

೩. ಹೊತ್ತನು – ಅರಿಯದ :: ದಿಕ್ಕನು –

೪. ನೋವಿನ – ಹಾಡಿನ :: ಕತ್ತಲ –

೫. ಬೆಟ್ಟವ – ಹತ್ತಿ :: ಬೆಟ್ಟವ –

ಈ) **ಸಂಬಂಧವಿಲ್ಲದ ಪದವನ್ನು ಗುರುತಿಸಿ ಬರೆಯಿರಿ:**

೧) ಕುರಿಗಳು, ದನಗಳು, ಕುರುಬರು, ಗಿಡಗಳು

೨) ಎಂಜಲು, ಸಗಣಿ, ಗಂಜಲ, ಗಂಜಿಯ

೩) ಆಳ, ಪಾತಾಳ, ಕರಾಳ, ನೋವು

೪) ಕತ್ತಲು, ಬೆಳಕು, ದಿಕ್ಕು, ಬಿಸಿಲು

೫) ಗುಡಿಗೋಪುರ, ಥಳಥಳ, ಜುಳು, ಜುಳು, ಸರಸರ

ಉ) **ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧) ಬಾಲಕರು ಕುರಿಗಳ ಕಾಯ್ದು ದನಗಳ ಮೇಯಿಸಿ ಏನನ್ನು ಕುಡಿಯದೇ ಹೋದರು?

೨) ಗಿಡಗಳ ಜೊತೆಗೆ ಬೆಳೆದವರಿಗೆ ಯಾವ ಭಾಗ್ಯ ಸಿಗಲಿಲ್ಲ?

೩) ಗಂಜಿಯ ಕಾಣದೆ ದುಡಿದವರು ಏನು ಮಾಡಿದರು?

೪) ಚಳಿಯನು ತಡೆಯದೆ ಕುಸಿದವರು ಏನಾದರು?

೫) ಸೀಳು ದಾರಿಯ ಪಯಣಿಗರು ಯಾರು?

೬) ಬೆಳಕನು ಅರಸುವವರು ಯಾರು?

ಊ) ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:

೧) ಕವಿಗಳು ತಮ್ಮನ್ನು ಗಿಡಗಳ ಜೊತೆಯಲಿ ಬೆಳೆದವರೆಂದು ಹೇಳಿಕೊಳ್ಳಲು ಕೊಡುವ ಕಾರಣಗಳೇನು?

೨) ಕಮರುವ ಬಣ್ಣದ ಕನಸುಗಳು ಎಂದರೆ ಯಾರು? ಹೇಗೆ?

೩) ಸೀಳು ದಾರಿಯ ಪಯಣಿಗರ ಸ್ಥಿತಿ ಯಾವ ರೀತಿ ಇದೆ?

ಋ) ಈ ಸಾಲುಗಳನ್ನು ವಿವರಿಸಿ:

೧) 'ಹಾಲು ಕುಡಿಯದೇ ಹೋದವರು'

೨) 'ಗಂಜಿಯ ಕಾಣದೆ ದುಡಿದವರು'

೩) 'ಕಮರುವ ಬಣ್ಣದ ಕನಸುಗಳು'

೪) 'ಸೀಳುದಾರಿಯ ಪಯಣಿಗರು'

೫) 'ಗಿಡಗಳ ಜೊತೆಯಲಿ ಬೆಳೆದವರು'

## – ಭಾಷಾಭ್ಯಾಸ –



**ಈ ವಾಕ್ಯಗಳಲ್ಲಿರುವ ಗೆರೆ ಎಳೆದ ಪದದ ಕರ್ತೃ, ಕರ್ಮ ಮತ್ತು ಕ್ರಿಯಾಪದಗಳನ್ನು ಗುರುತಿಸಿ ಬರೆಯಿರಿ:**

೧. ತನ್ಮಯಿ ಹಾಲನ್ನು ಕುಡಿದಳು

೨. ಭುವನ ಹಾಡನ್ನು ಹಾಡಿದಳು

೩. ಕಾರ್ತಿಕ್ ಹಣ್ಣನ್ನು ತಿಂದನು.

೪. ಮಕ್ಕಳು ಆಟವನ್ನು ಆಡಿದರು.

೫. ಗುರುಗಳು ಪಾಠವನ್ನು ಹೇಳಿದರು.

೬. ಹುಡುಗರು ಸಾಲಾಗಿ ಕುಳಿತು ಊಟ ಮಾಡಿದರು.

## – ಚಟುವಟಿಕೆ –

ಅ) ಡಾ॥ ಸಿದ್ದಲಿಂಗಯ್ಯ ಅವರ ಮೆರವಣಿಗೆ ಸಮಗ್ರ ಕವನ ಸಂಕಲನವನ್ನು ಸಂಗ್ರಹಿಸಿ ಓದಿ.

ಆ) ಹೋದವರು, ಬೆಳೆದವರು, ದುಡಿದವರು, ಕುಸಿದವರು

ಈ ಪದಗಳ ಬಹುವಚನ ರೂಪದ ಅಂತ್ಯವನ್ನು ಗಮನಿಸಿ. ಅದರಂತೆ ಐದು ಪದಗಳನ್ನು ಬರೆಯಿರಿ.

☆ ☆ ☆ ☆ ☆

# ೧೪. ಕಲ್ಲು ಹೇಳುವ ಕತೆ (ಗದ್ಯ)

ಶಾಸನಗಳು ಕನ್ನಡ ನಾಡಿನ ಧಾರ್ಮಿಕ, ಸಾಮಾಜಿಕ, ರಾಜಕೀಯ ಇತಿಹಾಸವನ್ನು ತಿಳಿಯಲು ಸಹಾಯಕವಾಗಿವೆ. ನಾಡಿನ ಉದ್ದಗಲಕ್ಕೂ ಇರುವ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಶಾಸನಗಳು ಕರ್ನಾಟಕದ ವೀರರ, ಮಹಾಸತಿಯರ, ದಾನಶೂರರ, ರಾಜಮಹಾರಾಜರ, ಕತೆಗಳನ್ನು ತಿಳಿಸುವ ಸಾಹಿತ್ಯ ಸಿರಿಯಾಗಿವೆ. ಶಾಸನಗಳು ಸಾರುವ ವೀರರಲ್ಲಿ ಒಬ್ಬನಾದ ಅಮಾತ್ಯ ಗಂಗರಾಜನ ಬಗ್ಗೆ ನಾವಿಂದು ತಿಳಿಯೋಣ.




ಹೊಯ್ಸಳರಾಜ ವಿಷ್ಣುವರ್ಧನ ಕನ್ನಡನಾಡು ಕಂಡ ಶ್ರೇಷ್ಠ ರಾಜರುಗಳಲ್ಲೊಬ್ಬ. ಈತನು ಶೌರ್ಯ, ಪ್ರತಾಪ, ಧರ್ಮಸಹಿಷ್ಣುತೆ, ಕಲಾಪೋಷಣೆ, ಉತ್ತಮ ಆಡಳಿತ ನೀತಿಯಿಂದ ಹೆಸರು ಮಾಡಿದವನು. ಈತನ ಆಪ್ತ ದಂಡನಾಯಕನೇ ಗಂಗರಾಜ. ಸಾಹಸ, ನಿಷ್ಠೆಗಾಗಿ ಜನಪ್ರಿಯತೆ ಗಳಿಸಿದವನು. ವಿಷ್ಣುವರ್ಧನನ ಸಾಮ್ರಾಜ್ಯ ವಿಸ್ತರಣೆ, ನಾಡರಕ್ಷಣೆಗೆ ಗಂಗರಾಜನೇ ಬಲಗೈ.

ಗಂಗರಾಜನ ತಂದೆ ಏಚ. ಈತನು ವಿಷ್ಣುವರ್ಧನನ ತಾತ ನೃಪಕಾಮನಲ್ಲಿ ದಳಪತಿಯಾಗಿದ್ದ. ಅಣ್ಣನಾದ ಬಮ್ಮ ಸಹ ದಂಡನಾಯಕನಾಗಿದ್ದ. ಮಕ್ಕಳಾದ ಏಚ ಮತ್ತು ಬಪ್ಪರೂ ಹೊಯ್ಸಳ ಸಾಮ್ರಾಜ್ಯದಲ್ಲಿ

ದಂಡನಾಯಕರೇ. ಇಡೀ ಗಂಗರಾಜನ ಕುಟುಂಬವೇ ಹೊಯ್ಸಳ ಸಾಮ್ರಾಜ್ಯಕ್ಕೆ ನಿಷ್ಠೆಯಿಂದಿತ್ತು. ಗಂಗರಾಜನ ಸಾಹಸದ ಕತೆಗಳು ಅನೇಕ ಇವೆ.

ಗಂಗರಾಜನ ನೇತೃತ್ವದಲ್ಲಿ ಸುತ್ತಮುತ್ತಲಿನ ಸಣ್ಣ ಸಣ್ಣ ರಾಜ್ಯಗಳನ್ನು ಹೊಯ್ಸಳ ಸೈನ್ಯ ಜಯಿಸಿತು. ಹೀಗೆ ಪ್ರಬಲರಾಗುತ್ತಲೇ ಹೋದ ಹೊಯ್ಸಳ ರಾಜ್ಯದ ಸೈನ್ಯ ತಲಕಾಡಿನಲ್ಲಿದ್ದ ಚೋಳರನ್ನು ಎದುರಿಸಿ, ಓಡಿಸಿದ್ದು ಮಹಾನ್ ವಿಜಯವೇ ಆಗಿದೆ. ಏಕೆಂದರೆ ಚೋಳಸಾಮ್ರಾಜ್ಯ ದಕ್ಷಿಣದಲ್ಲಿ ಅತ್ಯಂತ ಬಲಿಷ್ಠವಾಗಿತ್ತು. ಅಷ್ಟೇ ಬಲಿಷ್ಠವಾದ ಮತ್ತೊಂದು ಸಾಮ್ರಾಜ್ಯವೆಂದರೆ ಚಾಲುಕ್ಯ ಸಾಮ್ರಾಜ್ಯ. ಹೊಯ್ಸಳ ಸೈನ್ಯ ಗಂಗರಾಜನ ನೇತೃತ್ವದಲ್ಲಿ ಹಾಸನ ಜಿಲ್ಲೆಯ ಕಣ್ಣೇಗಾಲ ಎಂಬಲ್ಲಿ ಚಾಲುಕ್ಯರನ್ನು ಎದುರಿಸಿ ದಿಗ್ವಿಜಯವನ್ನು ಸಾಧಿಸಿತು. ದಕ್ಷಿಣ ಭಾರತದ ಎರಡು ಬಲಿಷ್ಠ ಸಾಮ್ರಾಜ್ಯಗಳನ್ನು ಬಗ್ಗುಬಡಿದು, ಮೂರನೆಯ ಮಹಾನ್ ಸಾಮ್ರಾಜ್ಯವಾಗಿ ಹೊಯ್ಸಳ ರಾಜ್ಯ ಬೆಳೆಯುವಲ್ಲಿ ಗಂಗರಾಜ ಪ್ರಮುಖ ಪಾತ್ರ ವಹಿಸಿದ್ದನು. ಪುಟ್ಟ ಸಾಮಂತ ರಾಜ್ಯವೊಂದು ಇದ್ದಕ್ಕಿದ್ದಂತೆ ದೊಡ್ಡ ಸಾಮ್ರಾಜ್ಯವಾಗಬೇಕೆಂದರೆ, ಅವರ ಸೈನ್ಯ ಎಷ್ಟು ಸಮರ್ಥವಾಗಿರಬೇಡ! ಗಂಗರಾಜನ ಉಸ್ತುವಾರಿಯಲ್ಲಿ ಹೊಯ್ಸಳ ಸೈನ್ಯ ಶೌರ್ಯ, ಸಾಹಸಗಳನ್ನು ಮೆರೆಯಿತು.

ಗಂಗರಾಜನ ಹೆಸರು ಚರಿತ್ರೆಯಲ್ಲಿ ಶಾಶ್ವತವಾಗಿರಲು ಆತನು ಶೂರನೆಂಬುದೊಂದೇ ಕಾರಣವಲ್ಲ. ಆತನು ಉದಾರನೂ, ಸ್ವಾಮಿನಿಷ್ಠನೂ, ನಿಃಸ್ವಾರ್ಥಿಯೂ, ಧರ್ಮನಿಷ್ಠನೂ, ಮಹಾದಾನಗುಣವುಳ್ಳವನೂ ಆಗಿದ್ದ ಎಂದು ಶಾಸನಗಳು ಚಿತ್ರಿಸಿವೆ.

ಗಂಗರಾಜನಿಗೆ ಮಹಾ ಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ, ದ್ರೋಹಘರಟ್ಟ, ಸ್ವಾಮಿದ್ರೋಹಘರಟ್ಟ ಮುಂತಾದ ಬಿರುದುಗಳಿದ್ದವು.

ಗಂಗರಾಜನು ಜೈನಧರ್ಮೀಯ, ಮಹಾಜಿನಭಕ್ತ. ಹೊಯ್ಸಳರ ರಾಜಧಾನಿ ಹಳೆಯಬೀಡಿಗೆ ಶ್ರವಣಬೆಳಗೊಳ ಬಹಳ ಹತ್ತಿರ. ಶ್ರವಣಬೆಳಗೊಳದ ಗೊಮ್ಮಟೇಶ್ವರನಿಗೆ ಗಂಗರಾಜ ಗೋವಿಂದವಾಡಿ ಎಂಬ ಗ್ರಾಮವನ್ನೇ ಉಂಬಳಿಯಾಗಿ ನೀಡಿದ. ಗೊಮ್ಮಟನ ಸುತ್ತ ಪ್ರಾಕಾರವನ್ನು ನಿರ್ಮಿಸಿದ. ಯುದ್ಧಗಳಲ್ಲಿ ಗೆದ್ದು ಬಂದಾಗಲೆಲ್ಲ ವಿಷ್ಣುವರ್ಧನ ಮಹಾರಾಜನು ಗಂಗರಾಜನಿಗೆ ಬಹುಮಾನಗಳನ್ನು ನೀಡುತ್ತಿದ್ದ. ಗಂಗರಾಜ ಈ ಬಹುಮಾನಗಳನ್ನು ತನ್ನ ಗುರು ಶುಭಚಂದ್ರಸಿದ್ಧಾಂತದೇವನಿಗೆ ಅರ್ಪಿಸುತ್ತಿದ್ದ. ಜೈನ ದೇವಾಲಯಗಳ ಜೀರ್ಣೋದ್ಧಾರ, ನಿರ್ಮಾಣ, ಚೈತ್ಯ ಮಂಟಪಗಳ ನಿರ್ಮಾಣಕ್ಕೆ ದಾನ ನೀಡುತ್ತಿದ್ದ.

ಕ್ರಿ.ಶ.೧೧೩೩ರಲ್ಲಿ ಗಂಗರಾಜ ಮೃತನಾದರೂ, ಆತನ ಸಾಹಸ, ಸ್ವಾಮಿನಿಷ್ಠೆ, ದೈವಭಕ್ತಿ ಅಮರವಾಗಿವೆ. ಗಂಗರಾಜ ಧರ್ಮಪರಾಯಣ, ಸತ್ಯವಾಕ್ಯಭಕ್ತಾಗ್ರೇಸರ, ಅನ್ನ-ವಿದ್ಯಾದಾನನಿರತನಾಗಿದ್ದ. ಕಣ್ಣುಹಾಯಿಸಿದೆಡೆ, ಮನವೆಳೆದೆಡೆ, ತಂಗಿದೆಡೆ ಜೈನ ಗೃಹಗಳನ್ನು ನಿರ್ಮಿಸುತ್ತಿದ್ದ ಎಂದು ಶಾಸನಗಳು ಇಂದಿಗೂ ಕೊಂಡಾಡುತ್ತಿವೆ.

ಇವನ ಸ್ವಾಮಿನಿಷ್ಠೆ, ಜನಪರ ಕಾರ್ಯಗಳು ಇಂದಿಗೂ ಅನುಕರಣೀಯ.

– ಸಂಪಾದಿತ

## ಕೃತಿ ಪರಿಚಯ

ಕರ್ನಾಟಕ ಸಂಸ್ಕೃತಿ ಇಲಾಖೆಯು ಪ್ರಕಟಿಸಿದ **'ಕರ್ನಾಟಕ ಸಂಸ್ಕೃತಿ ವಿಶ್ವಕೋಶ'** ಈ ಪಾಠಕ್ಕೆ ಆಧಾರ ಗ್ರಂಥವಾಗಿದೆ. ಕರ್ನಾಟಕದ ಇತಿಹಾಸ, ಸಾಹಿತ್ಯ, ಸಂಗೀತ, ಶಿಲ್ಪಕಲೆಗಳ ಬಗ್ಗೆ ಅತ್ಯಂತ ನಿಖರವಾದ ಮಾಹಿತಿಗಳನ್ನು ಈ ಗ್ರಂಥದಿಂದ ಪಡೆಯಬಹುದಾಗಿದೆ. ಅಷ್ಟೇ ಅಲ್ಲ, ಬೇರೆಲ್ಲೂ ಸಿಗಲಾರದಂಥ ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಧಾರ್ಮಿಕ ವಿವರಗಳೂ ಈ ಗ್ರಂಥದಲ್ಲಿ ದೊರೆಯುತ್ತದೆ.

### – ಓದಿ ತಿಳಿಯಿರಿ –

ಸಾಹಿತ್ಯ ಸಿರಿ – ಸಾಹಿತ್ಯ ಸಂಪತ್ತು

ಬಲಿಷ್ಠ – ಶಕ್ತಿಯುತ

ಘೋಷಣೆ – ಸಾರುವುದು, ಪ್ರಕಟಣೆ

ವಿಸ್ತರಣೆ – ವಿಸ್ತರಿಸುವುದು

ಕೊಂಡಾಡು – ಹೊಗಳು, ಪ್ರಶಂಸಿಸು

ಕಣ್ಣುಹಾಯಿಸು – ದೃಷ್ಟಿ ಹರಿಸು

ಮನವೆಳೆದೆಡೆ – ಮನಸ್ಸನ್ನು ಆಕರ್ಷಿಸಿದ ಕಡೆ

ತಂಗಿದೆಡೆ – ವಿಶ್ರಾಂತಿ ಪಡೆದ ನೆಲೆ

ನಿರತ – ತೊಡಗಿಸಿಕೊಂಡಿರುವವನು

ಶ್ರೇಷ್ಠ – ಉನ್ನತ, ದೊಡ್ಡ

ಚೈತ್ಯ ಮಂಟಪ – ಸತ್ತವರ ನೆನಪಿನಲ್ಲಿ ಕಟ್ಟಲಾದ ಜೈನ, ಬೌದ್ಧ ಮಂಟಪಗಳು

ಅರ್ಪಿಸು – ಕಾಣಿಕೆಯಾಗಿ ನೀಡು

ವೀರಗಲ್ಲು – ರಣರಂಗದಲ್ಲಿ ಕಾದು ಮಡಿದ ವೀರರ ಸ್ಮಾರಕ ಕಲ್ಲುಗಳು

ಉಂಬಳಿ – ದತ್ತಿ, ಮಾನ್ಯವಾಗಿ ಕೊಡುವ ಭೂಮಿಗ್ರಾಮ

ಪ್ರಾಕಾರ – ಸುತ್ತುಗೋಡೆ, ಪೌಳಿ

ನಿರ್ಮಾಣ – ಕಟ್ಟಿಸುವುದು

ಅಮರ – ನಾಶವಿಲ್ಲದ್ದು

ಬಲಗೈ – ಸಹಾಯಕ, ನಂಬಿಕಸ್ತ

ಕಲಾಪೋಷಣೆ – ಕಲೆಗಳನ್ನು ಪೋಷಿಸುವುದು, ಪ್ರೋತ್ಸಾಹಿಸುವುದು

ಜೀರ್ಣೋದ್ಧಾರ – ದುರಸ್ತಿ

### – ಗಮನಿಸಿರಿ –

ಶಾಸನ – ತಾಮ್ರದ ತಗಡು ಅಥವಾ ಕಲ್ಲಿನ ಮೇಲೆ ದಾನ, ದತ್ತಿ, ಸಾಹಸದ ಬಗ್ಗೆ ಕೊರೆದಿರುವ ಬರೆಹ

ಮಾಸ್ತಿಕಲ್ಲು – ಊರಿನ ಹಿತಕ್ಕಾಗಿ ಸಹಗಮನ ಮಾಡಿದ ವೀರವನಿತೆಯ ನೆನಪಿಗಾಗಿ ನೆಟ್ಟಿರುವ ಸ್ಮಾರಕ ಶಿಲೆ

ಸಾಹಿತ್ಯಸಿರಿ – ಸಂಸ್ಕೃತಿಯನ್ನು ದಾಖಲು ಮಾಡಿರುವ ಬರೆಹದ ಸಂಪತ್ತು.

ದಿಗ್ವಿಜಯ – ಎಲ್ಲ ದಿಕ್ಕುಗಳಲ್ಲಿ ಸಂಚರಿಸಿ ರಾಜ್ಯಗಳನ್ನು ಜಯಿಸುವುದು.

ಶಾಶ್ವತ – ಬಹುಕಾಲ ನಿಲ್ಲಬಲ್ಲ, ಸ್ಥಿರವಾದ

ನಿಃಸ್ವಾರ್ಥ – ತನಗಾಗಿ ಏನನ್ನೂ ಬಯಸದ

ಜಿನಭಕ್ತ – ಇಂದ್ರಿಯಗಳನ್ನು ಗೆದ್ದ ಅರ್ಹಂತರಲ್ಲಿ ಶ್ರದ್ಧೆಯನ್ನು ಹೊಂದಿರುವವ

ಭಕ್ತಾಗ್ರೇಸರ – ಭಕ್ತರ ಸಮೂಹದಲ್ಲಿ ಮೇಲ್ಪಂಕ್ತಿಯಲ್ಲಿರುವವನು

## – ಅಭ್ಯಾಸ –



**ಅ. ಹೊಂದಿಸಿ ಬರೆಯಿರಿ**

| ಅ | ಆ |
|---|---|
| ೧. ಏಚ | ೧. ಜೈನಗುರು |
| ೨. ವಿಷ್ಣುವರ್ಧನ | ೨. ದಂಡನಾಯಕ |
| ೩. ಗಂಗರಾಜ | ೩. ದಳಪತಿ |
| ೪. ಶುಭಚಂದ್ರಸಿದ್ಧಾಂತ | ೪. ಹೊಯ್ಸಳರಾಜ |
| | ೫. ಬಲಿಷ್ಠ |

**ಆ. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ಭರ್ತಿ ಮಾಡಿರಿ:**

೧. ಶಾಸನಗಳು ________ ವನ್ನು ತಿಳಿಯಲು ಸಹಾಯಕವಾಗಿವೆ. (ಇತಿಹಾಸ, ವ್ಯಾಪಾರ, ಜನಸಂಖ್ಯೆ)

೨. ವೀರರ ನೆನಪಿನಲ್ಲಿ ಸ್ಥಾಪಿಸುವ ಸ್ಮಾರಕಗಳು ________ (ಮಾಸ್ತಿಕಲ್ಲು, ದಾನಶಾಸನ, ವೀರಗಲ್ಲು)

೩. ವಿಷ್ಣುವರ್ಧನನ ________ ನೃಪಕಾಮ (ತಂದೆ, ತಾತ, ಮಗ)

೪. ದ್ರೋಹಘರಟ್ಟ ಎಂಬುದು ________ನ ಬಿರುದು (ವಿಷ್ಣುವರ್ಧನ, ಗಂಗರಾಜ, ನೃಪಕಾಮ)

**ಇ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ವಿಸ್ತರಿಸಿ:**

೧. ಶಾಸನಗಳು ಏನನ್ನು ತಿಳಿಸುತ್ತವೆ?

೨. ಗಂಗರಾಜ ಯಾವ ರಾಜನಲ್ಲಿ ದಂಡನಾಯಕನಾಗಿದ್ದ?

೩. ಗಂಗರಾಜ ಎದುರಿಸಿದ ಎರಡು ದೊಡ್ಡ ಯುದ್ಧಗಳು ಯಾವುವು?

೪. ಗಂಗರಾಜ ಯಾವ ಧರ್ಮಕ್ಕೆ ಸೇರಿದವನು?

೫. ಗಂಗರಾಜನ ಗುರು ಯಾರು?

**ಈ. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ:**

ಬಲಗೈ, ಶ್ರೇಷ್ಠ, ಶಾಶ್ವತ, ವಿಸ್ತರಣೆ, ಅಮರ, ಅರ್ಪಿಸು, ಕೊಂಡಾಡು, ಪ್ರಾಕಾರ, ಉಂಬಳಿ, ನಿರ್ಮಾಣ

**ಉ. ಈ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಶಾಸನಗಳನ್ನು ಸಾಹಿತ್ಯ ಸಿರಿ ಎಂದು ಹೇಗೆ ಹೇಳಬಹುದು?

೨. ವಿಷ್ಣುವರ್ಧನನ ಖ್ಯಾತಿಗೆ ಕಾರಣಗಳೇನು?

೩. ಗಂಗರಾಜ ಯಾರು? ಇವನು ಜನಪ್ರಿಯನಾಗಿರಲು ಕಾರಣವೇನು?

೪. ಗಂಗರಾಜ ಕೈಗೊಂಡ ಎರಡು ಪ್ರಮುಖ ಯುದ್ಧಗಳು ಯಾವುವು?

೫. ದಕ್ಷಿಣ ಭಾರತದ ಮೂರು ಬಲಿಷ್ಠ ಸಾಮ್ರಾಜ್ಯಗಳು ಯಾವುವು?

೬. ಗಂಗರಾಜನು ಜೈನಧರ್ಮಕ್ಕೆ ಯಾವ ರೀತಿ ಪ್ರೋತ್ಸಾಹ ನೀಡಿದ?

೭. ಗಂಗರಾಜನ ಬಿರುದುಗಳೇನು?

೮. ಶಾಸನಗಳು ಗಂಗರಾಜನನ್ನು ಏನೆಂದು ಕೊಂಡಾಡುತ್ತವೆ?

೯. ಹೊಯ್ಸಳರಲ್ಲಿ ಪ್ರಮುಖ ರಾಜ ಯಾರು? ಈತನು ಏಕೆ ಪ್ರಸಿದ್ಧಿ ಹೊಂದಿದ?

೧೦. ವಿಷ್ಣುವರ್ಧನನ ಕಾಲದ ಎರಡು ಪ್ರಮುಖ ಕಾರ್ಯಗಳು ಯಾವುವು?

**ಊ. ವಿರುದ್ಧಾರ್ಥಕ ಪದಗಳನ್ನು ಬರೆಯಿರಿ:**

ಧರ್ಮ, ಗೆಲವು, ಧೈರ್ಯ, ವಿಸ್ತರಿಸು, ಶಾಶ್ವತ, ನಿಃಸ್ವಾರ್ಥ

**ಋ. ಆವರಣದಲ್ಲಿ ಕೊಟ್ಟಿರುವ ಪದಗಳಲ್ಲಿ ಸಂಬಂಧಿಸಿದ ಪದವನ್ನು ಆಯ್ದು ಬರೆಯಿರಿ:**

೧. ವಿಷ್ಣುವರ್ಧನನು ____________ ಮನೆತನದ ರಾಜ (ಹೊಯ್ಸಳ, ಚಾಲುಕ್ಯ)

೨. ಶಾಸನಗಳು __________ ಆಗಿವೆ (ಚಿತ್ರಕೋಶ, ಸಾಹಿತ್ಯಸಿರಿ)

೩. ಹೊಯ್ಸಳ ರಾಜ ನೃಪಕಾಮನಲ್ಲಿ __________ ದಳಪತಿಯಾಗಿದ್ದ (ಗಂಗರಾಜ, ಏಚ)

೪. ಗಂಗರಾಜನ ಬಿರುದಾವಳಿಗಳಲ್ಲಿ __________ ಕೂಡ ಒಂದು (ದ್ರೋಹಘರಟ್ಟ, ರಾವಬಹದ್ದೂರ)

**ಎ. ಸಮಾನಾರ್ಥಕ ಕೊಡುವ ಎರಡು ಪದಗಳನ್ನು ಬರೆಯಿರಿ:**

೧. ವೀರ .......... ..........    ೨. ದಳಪತಿ .......... ..........

೩. ಜನಪ್ರಿಯ .......... ..........    ೪. ಮಂತ್ರಿ .......... ..........



## – ಭಾಷಾಭ್ಯಾಸ –

**ಸಂಧಿ** – ಎರಡು ಅಕ್ಷರಗಳು ಕಾಲ ವಿಳಂಬವಿರದೆ ಸೇರಿದಾಗ 'ಸಂಧಿ' ಆಗುತ್ತದೆ. ಕನ್ನಡ ಸಂಧಿಗಳಲ್ಲಿ ಮೂರು ವಿಧ:

| **ಲೋಪಸಂಧಿ** | **ಆಗಮಸಂಧಿ** | **ಆದೇಶಸಂಧಿ** |
|---|---|---|
| **ಪೂರ್ವಪದ+ಉತ್ತರಪದ=ಸಂಧಿಪದ** | **ಪೂರ್ವಪದ+ಉತ್ತರಪದ= ಸಂಧಿಪದ** | **ಪೂರ್ವಪದ+ಉತ್ತರಪದ= ಸಂಧಿಪದ** |
| ಕಲಿಯದೆ+ಇರುವುದು=ಕಲಿಯದಿರುವುದು | ಮನೆ+ಅಲ್ಲಿ=ಮನೆಯಲ್ಲಿ | ಮಳೆ+ಕಾಲ=ಮಳೆಗಾಲ |
| ಊರು+ಊರು=ಊರೂರು | ಮಗು+ಇಗೆ=ಮಗುವಿಗೆ | ಹೊಸ+ಕನ್ನಡ=ಹೊಸಗನ್ನಡ |
| ದೇವರು+ಇಂದ=ದೇವರಿಂದ | ಕೆರೆ+ಅನ್ನು=ಕೆರೆಯನ್ನು | ಎಳೆ+ಕರು=ಎಳೆಗರು |
| ಅವನ+ಅಂತೆ=ಅವನಂತೆ | ಮರ+ಅನ್ನು=ಮರವನ್ನು | ಮೈ+ತೊಳೆ=ಮೈದೊಳೆ |

ಪೂರ್ವಪದದ ಕೊನೆಯ ಸ್ವರ ಲೋಪವಾಗಿ ಉತ್ತರಪದದ ಸ್ವರದೊಂದಿಗೆ ಸೇರುವುದೇ **ಲೋಪಸಂಧಿ.**

ಸಂಧಿ ಆದಾಗ 'ಯ' ಅಥವಾ 'ವ' ಬಂದು ಸೇರುವುದೇ **ಆಗಮಸಂಧಿ.**

ಸಂಧಿಯಾದಾಗ ಉತ್ತರ ಪದದ ಮೊದಲ ಅಕ್ಷರಗಳಿಗೆ ಬದಲಾಗಿ ಬೇರೆ ವ್ಯಂಜನಗಳು ಬರುವುದೇ **ಆದೇಶಸಂಧಿ.**

ಈ ಮೇಲಿನ ಮೂರು **ಕನ್ನಡ ಸಂಧಿಗಳು.**

**ಪ್ರಕೃತಿ ಭಾವ:–** ಸಂಧಿ ಕಾರ್ಯ ಆಗದಿರುವುದನ್ನು ಪ್ರಕೃತಿ ಭಾವ ಎನ್ನುತ್ತಾರೆ.
ಉದಾ: ಅಕ್ಕಾ + ಇತ್ತ ಬಾ = ಅಕ್ಕಾ ಇತ್ತ ಬಾ.

## – ಚಟುವಟಿಕೆ –

**ಈ ಗದ್ಯವನ್ನು ಓದಿ ಪ್ರಶ್ನೆಗಳಿಗೆ ಉತ್ತರಿಸಿರಿ:**

ಒಂದು ಅಂಗಡಿಯಲ್ಲಿ ಅನೇಕ ಇಲಿಗಳು ಇದ್ದವು. ಅವು ಅಂಗಡಿಯಲ್ಲಿರುವ ದವಸ ಧಾನ್ಯಗಳನ್ನು ತಿಂದು ಹಾಕುತ್ತಿದ್ದವು. ಪರಿಣಾಮವಾಗಿ ಅಂಗಡಿಯ ಯಜಮಾನನಿಗೆ ನಷ್ಟವಾಗುತ್ತಿತ್ತು. ಇಲಿಗಳ ಕಾಟವನ್ನು ತಡೆಗಟ್ಟಲು ಆತ ಒಂದು ಉಪಾಯ ಮಾಡಿದ. ಒಂದು ಬೆಕ್ಕನ್ನು ತಂದು ಅಂಗಡಿಯಲ್ಲಿರಿಸಿದ. ಬೆಕ್ಕು ದಿನವೂ ಇಲಿಗಳನ್ನು ಹಿಡಿದು ತಿನ್ನಲಾರಂಭಿಸಿತು. ಈಗ ಇಲಿಗಳಿಗೆ ಯೋಚನೆಗಿಟ್ಟುಕೊಂಡಿತು. ಇದಕ್ಕೆ ಪರಿಹಾರ ಹುಡುಕುವ ಸಲುವಾಗಿ ಇಲಿಗಳೆಲ್ಲ ಸಭೆ ಸೇರಿದವು. ಒಂದು ಇಲಿ ಹೇಳಿತು – "ಬೆಕ್ಕಿನ ಕತ್ತಿಗೆ ಒಂದು ಗಂಟೆಯನ್ನು ಕಟ್ಟೋಣ. ಬೆಕ್ಕು ನಮ್ಮನ್ನು ಹಿಡಿಯಲು ಬಂದಾಗ ಗಂಟೆಯ ಶಬ್ದವಾಗುತ್ತದೆ. ಆಗ ನಾವು ಓಡಿ ಹೋಗಬಹುದು". ಈ ಸಲಹೆಯನ್ನು ಕೇಳಿದ ಇಲಿಗಳೆಲ್ಲ ಪರಿಹಾರ ಸಿಕ್ಕಿತೆಂಬ ಸಂಭ್ರಮದಲ್ಲಿ ಕುಣಿದವು. ಆಗ ಒಂದು ಮುದಿ ಇಲಿ ಹೇಳಿತು, "ಮೂರ್ಖರೇ, ಸುಮ್ಮನಿರಿ. ಬೆಕ್ಕಿಗೆ ಯಾರು ಗಂಟೆಯನ್ನು ಕಟ್ಟುವವರು ಹೇಳಿ". ಆಗ ಇಲಿಗಳೆಲ್ಲ ತೆಪ್ಪಗಾದವು.

೧. ಇಲಿಗಳು ಏನು ಮಾಡುತ್ತಿದ್ದವು?

೨. ಅಂಗಡಿ ಯಜಮಾನ ಏನು ಉಪಾಯ ಮಾಡಿದ?

೩. ಬೆಕ್ಕು ಯಾವ ರೀತಿ ಯಜಮಾನನಿಗೆ ಉಪಕಾರ ಮಾಡಿತು?

೪. ಇಲಿಗಳ ಕಷ್ಟಕ್ಕೆ ಏನು ಕಾರಣ?

೫. ಬೆಕ್ಕಿನ ಕಾಟ ತಪ್ಪಿಸಲು ಇಲಿಗಳ ಸಭೆ ಏನೆಂದು ತೀರ್ಮಾನಿಸಿತು?

೬. ಇಲಿಗಳು ಕುಣಿದಾಡಲು ಕಾರಣವೇನು?

೭. ಇಲಿಗಳೆಲ್ಲ ತೆಪ್ಪಗಾಗಲು ಕಾರಣವೇನು?

೮. ಈ ಕಥೆಗೆ ಏನೆಂದು ಶೀರ್ಷಿಕೆ ಕೊಡಬಹುದು?

☆ ☆ ☆ ☆ ☆

# ೧೫. ಗೌರವಿಸು ಜೀವನವ (ಪದ್ಯ)

– ಡಿ.ವಿ.ಜಿ.

ತೃಣಕೆ ಹಸಿರೆಲ್ಲಿಯದು? ಬೇರಿನದೆ? ಮಣ್ಣಿನದೆ? ।
ದಿನಪನದೆ? ಚಂದ್ರನದೆ? ನೀರಿನದೆ? ನಿನದೆ? ॥
ತಣಿತಣಿವ ನಿನ್ನ ಕಣ್ಣಿನ ಪುಣ್ಯವೋ ? ನೋಡು ।
ಗುಣಕೆ ಕಾರಣವೊಂದೆ? ಮಂಕುತಿಮ್ಮ ೧

ಗೌರವಿಸು ಜೀವನವ, ಗೌರವಿಸು ಚೇತನವ
ಆರದೋ ಜಗವೆಂದು ಭೇದವೆಣಿಸದಿರು
ಹೋರುವುದೆ ಜೀವನ ಸಮೃದ್ಧಿಗೋಸುಗ ನಿನಗೆ
ದಾರಿಯಾತ್ಮೋನ್ನತಿಗೆ – ಮಂಕುತಿಮ್ಮ ೨

ಒಮ್ಮೆ ಹೂದೋಟದಲಿ ಒಮ್ಮೆ ಕೆಳೆಕೂಟದಲಿ
ಒಮ್ಮೆ ಸಂಗೀತದಲಿ ಒಮ್ಮೆ ಶಾಸ್ತ್ರದಲ್ಲಿ
ಒಮ್ಮೆ ಸಂಸಾರದಲಿ ಮತ್ತೊಮ್ಮೆ ಮೌನದಲಿ
ಬ್ರಹ್ಮಾನುಭವಿಯಾಗೊ – ಮಂಕುತಿಮ್ಮ ೩

ವಿಸ್ತಾರದಲಿ ಬಾಳು ವೈಶಾಲ್ಯದಿಂ ಬಾಳು
ಕತ್ತಲೆಯ ಮೊಡಕು ಮೂಲೆಗಳ ಸೇರದಿರು
ಭಾಸ್ಕರನನುಗ್ರಹವೆ ನೂತ್ನ ಜೀವನ ಸತ್ತ್ವ
ಮೃತ್ಯುನಿನಗಲ್ಪತೆಯೊ – ಮಂಕುತಿಮ್ಮ ೪



## ಕೃತಿ–ಕರ್ತೃ ಪರಿಚಯ



ಡಿವಿಜಿ ಎಂದೇ ಪ್ರಸಿದ್ಧರಾಗಿರುವ ದೇವನಹಳ್ಳಿ ವೆಂಕಟರಮಣಯ್ಯ ಗುಂಡಪ್ಪ ಅವರು (ಜನನ : ೧೮೮೭) ಕೋಲಾರ ಜಿಲ್ಲೆಯ ಮುಳಬಾಗಿಲಿನವರು. ಪತ್ರಿಕೋದ್ಯಮಿಯಾಗಿ, ಗೋಖಲೆ ಸಾರ್ವಜನಿಕ ಸಂಸ್ಥೆಯ ಸ್ಥಾಪಕರಾಗಿ ಸಮಾಜಸೇವಕರಾಗಿ ಜನಪ್ರಿಯರಾಗಿದ್ದ ಅವರು ಸಾಹಿತಿಯಾಗಿ ಖ್ಯಾತನಾಮರಾಗಿದ್ದಾರೆ. 'ಮಂಕುತಿಮ್ಮನ ಕಗ್ಗ', 'ಮರುಳು ಮುನಿಯನ ಕಗ್ಗ', 'ಉಮರನ ಒಸಗೆ', 'ಜ್ಞಾಪಕ ಚಿತ್ರಶಾಲೆ', 'ಅಂತಃಪುರ ಗೀತೆಗಳು' ಮೊದಲಾದ ಮೌಲಿಕ ಕೃತಿಗಳನ್ನು ರಚಿಸಿದ್ದಾರೆ.

ಡಿವಿಜಿ ಅವರ 'ಶ್ರೀ ಮದ್ಭಗವದ್ಗೀತಾ ತಾತ್ಪರ್ಯ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ೧೯೩೨ರಲ್ಲಿ ಮಡಿಕೇರಿಯಲ್ಲಿ ಸಮಾವೇಶಗೊಂಡ ೧೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರಿಗೆ ಮೈಸೂರು ವಿಶ್ವವಿದ್ಯಾನಿಲಯವು ಗೌರವ ಡಿ.ಲಿಟ್ ಪದವಿ ನೀಡಿ ಗೌರವಿಸಿದೆ.

'ಗೌರವಿಸು ಜೀವನವ' ಕಾವ್ಯ ಭಾಗವನ್ನು ಡಿವಿಜಿ ಅವರ 'ಮಂಕುತಿಮ್ಮನ ಕಗ್ಗ' ಕೃತಿಯಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.

## – ಓದಿ ತಿಳಿಯಿರಿ –

ತೃಣ – ಹುಲ್ಲು, ಗರಿಕೆ
ತಣಿ – ತಂಪಾಗು, ತೃಪ್ತಿ ಹೊಂದು
ಪುಣ್ಯ – ಭಾಗ್ಯ, ಅದೃಷ್ಟ
ಜೀವನ – ಬದುಕು
ಸಮೃದ್ಧಿ – ಐಶ್ವರ್ಯ, ಆಧಿಕ್ಯ, ಪ್ರಗತಿ
ವಿಸ್ತಾರ – ಹರವು, ವಿಶಾಲತೆ
ಕೆಳೆ – ಸ್ನೇಹ, ಗೆಳೆತನ
ಕೂಟ – ಸಂಗ, ಗುಂಪು
ನೂತ್ನ – ನೂತನ, ಹೊಸ
ಸತ್ತ್ವ – ಸಾರ, ಬಲ, ಇರುವಿಕೆ
ದಿನಪ – ಸೂರ್ಯ, ರವಿ, ಭಾಸ್ಕರ, ಆದಿತ್ಯ
ಕಣ್ಣು – ನಯನ, ಅಕ್ಷಿ, ನೇತ್ರ
ಚೇತನ – ಮನಸ್ಸು, ಶಕ್ತಿ, ಚೈತನ್ಯ, ಆತ್ಮ
ಭೇದ – ಒಡಕು, ಬಿರುಕು, ವ್ಯತ್ಯಾಸ, ಭಿನ್ನತೆ
ದಾರಿ – ಮಾರ್ಗ, ಹಾದಿ, ಪಥ
ಮೊಡಕು – ಮೂಲೆ
ಸಂಸಾರ – ಕುಟುಂಬ
ಮೃತ್ಯು – ಸಾವು
ಅನುಗ್ರಹ – ಕೃಪೆ, ಆಶೀರ್ವಾದ, ದಯೆ
ಅಲ್ಪ – ಕಡಿಮೆ

## – ಗಮನಿಸಿರಿ –

ಆತ್ಮೋನ್ನತಿ – ಅಧ್ಯಾತ್ಮ ಸಾಧನೆಯಿಂದ ಉನ್ನತಿಗೇರುವುದು
ನೂತ್ನಜೀವನ ಸತ್ತ್ವ – ಹೊಸದನ್ನು ಕಾಣುವ ಮನಸ್ಸು
ಬ್ರಹ್ಮಾನುಭವಿ – ಅನುಭಾವದಿಂದ ಸಿದ್ಧಿ ಪಡೆದವರು



## – ಅಭ್ಯಾಸ –

**ಅ) ಕೊಟ್ಟಿರುವ ಪದಗಳಲ್ಲಿ ಸಂಬಂಧಿಸದ ಪದವನ್ನು ಗುರುತಿಸಿ ಬರೆಯಿರಿ:**

೧. ತೃಣ, ಬೇರು, ಮಣ್ಣು, ಅಲ್ಪ
೨. ಸೂರ್ಯ, ಚಂದ್ರ, ಭಾಸ್ಕರ, ರವಿ
೩. ಮನೆಗಳು, ಮರಗಳು, ಅಣ್ಣಂದಿರು, ಗಿಡಗಳು
೪. ಮಂಕುತಿಮ್ಮನ ಕಗ್ಗ, ಮರಳು ಮುನಿಯನ ಕಗ್ಗ, ಉಮರನ ಒಸಗೆ, ಇಂದ್ರಚಾಪ

ಆ) **ಸಮಾನಾರ್ಥಕ ಪದಗಳನ್ನು ಬರೆಯಿರಿ:**

*ಮಾದರಿ : ಭಾಸ್ಕರ – ರವಿ, ಸೂರ್ಯ, ಆದಿತ್ಯ, ದಿನಪ, ಭಾನು, ಅರ್ಕ, ನೇಸರು*

ಚಂದ್ರ, ಕಣ್ಣು, ಮೃತ್ಯು, ಸಂಸಾರ, ದಾರಿ

ಇ) **ಹೊಂದಿಸಿ ಬರೆಯಿರಿ:**

| ಅ | ಆ |
|---|---|
| ೧. ಡಿವಿಜಿ | ೧. ಜೀವನವ |
| ೨. ಗೌರವಿಸು | ೨. ಮಂಕುತಿಮ್ಮನ ಕಗ್ಗ |
| ೩. ವಿಸ್ತಾರದಲಿ | ೩. ಸೇರದಿರು |
| ೪. ಮೂಲೆಗಳ | ೪. ಬಾಳು |
| ೫. ಭಾಸ್ಕರನ | ೫. ಸಮೃದ್ಧಿ |
| | ೬. ಅನುಗ್ರಹ |

ಈ) **ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ:**

ಚೇತನ, ಗುಣ, ಸಮೃದ್ಧಿ, ಅನುಗ್ರಹ, ಸಂಗೀತ, ಮೌನ

ಉ) **ವಿರುದ್ಧಾರ್ಥಕ ಪದಗಳನ್ನು ಬರೆಯಿರಿ:**

ಪುಣ್ಯ, ಗೌರವ, ಅಲ್ಪ, ಮೌನ, ವಿವೇಕ, ಸಮ

ಊ) **ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧) ಡಿವಿಜಿ ಅವರ ಪೂರ್ಣ ಹೆಸರೇನು?

೨) ಗೌರವಿಸಬೇಕಾದುದು ಯಾವುದನ್ನು?

೩) ನೂತ್ನ ಜೀವನ ಸತ್ತ್ವ ಯಾವುದು?

೪) 'ಗೌರವಿಸು ಜೀವನವ' ಕಾವ್ಯ ಭಾಗದ ಮೂಲಕೃತಿ ಯಾವುದು?

ಋ) **ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

೧) ತೃಣದ ಹಸಿರಿಗೆ ಕಾರಣವಾದ ಅಂಶಗಳು ಯಾವುವು?

೨) ಜೀವನ ಹೇಗೆ ಸಮೃದ್ಧವಾಗುತ್ತದೆ?

೩) ಬ್ರಹ್ಮಾನುಭವಿಯಾಗಲು ಹೇಗೆ ಸಾಧ್ಯ?

೪) ಮೃತ್ಯು ಯಾವಾಗ ಅಲ್ಪವಾಗಿ ತೋರುತ್ತದೆ?

**ಎ) ಈ ಮಾತುಗಳು ಯಾರು–ಯಾರಿಗೆ–ಯಾವಾಗ ಹೇಳಿದರು, ತಿಳಿಸಿ:**

೧) ಗುಣಕೆ ಕಾರಣವೊಂದೆ

೨) ಆರದೋ ಜಗವೆಂದು ಭೇದವೆಣಿಸದಿರು

೩) ಬ್ರಹ್ಮಾನುಭವಿಯಾಗೊ

೪) ವಿಸ್ತಾರದಲಿಬಾಳು, ವೈಶಾಲ್ಯದಿಂಬಾಳು

## – ಭಾಷಾಭ್ಯಾಸ –

**ಅ) ಅಭ್ಯಾಸ ಚಟುವಟಿಕೆ**

**೧. ಈ ಪದ್ಯ ಭಾಗವನ್ನು ಪೂರ್ಣಗೊಳಿಸಿ:**

ಗೌರವಿಸು ಜೀವನವ ..................................

..................................................................

..................................................................

.............................................. ಮಂಕುತಿಮ್ಮ

೨. ಈ ಕಾವ್ಯಭಾಗದ ಮೂರನೆಯ ಪದ್ಯವನ್ನು ಕಂಠಪಾಠ ಮಾಡಿ.

**ಆ) ಈ ಪದಗಳನ್ನು ಗಮನಿಸಿ: ಎರಡು ಶಬ್ದಗಳು ಸೇರಿಕೊಂಡಿದ್ದು ಅವುಗಳನ್ನು ಬಿಡಿಸಿ ಬರೆಯಿರಿ:**

*ಮಾದರಿ : ಹಸಿರೆಲ್ಲಿಯದು – ಹಸಿರು + ಎಲ್ಲಿಯದು*

ಕಾರಣವೊಂದೆ, ಭೇದವೆಣಿಸದಿರು, ಭಾಸ್ಕರನನುಗ್ರಹವೆ, ಮತ್ತೊಮ್ಮೆ, ಸೇರದಿರು

**ಇ) ಈ ಕಾವ್ಯಭಾಗದಲ್ಲಿ ಪ್ರಶ್ನಾರ್ಥಕ ಚಿಹ್ನೆ ಇರುವ ಪದಗಳನ್ನು ಗುರುತಿಸಿ ಬರೆಯಿರಿ:**

*ಮಾದರಿ : ದಿನಪನದೆ?*

**ಈ) ಈ ಶಬ್ದಗಳ ಕೊನೆಯ ಅಕ್ಷರಗಳು ಒಂದೇ ರೀತಿ ಇರುವುದನ್ನು ಗಮನಿಸಿ. ಅದರಂತೆ ನಾಲ್ಕು ಪದಗಳನ್ನು ಬರೆಯಿರಿ:**

ಹೂದೋಟದಲಿ, ಕೆಳೆಕೂಟದಲಿ, ಸಂಗೀತದಲಿ, ಸಂಸಾರದಲಿ

**ಉ) ಈ ಪದ್ಯವನ್ನು ಗದ್ಯರೂಪದಲ್ಲಿ ಬರೆಯಿರಿ:**

ತೃಣಕೆ ಹಸಿರೆಲ್ಲಿಯದು? ಬೇರಿನದೆ? ಮಣ್ಣಿನದೆ?
ದಿನಪನದೆ? ಚಂದ್ರನದೆ? ನೀರಿನದೆ? ನಿನದೆ?
ತಣಿತಣಿಪ ನಿನ್ನ ಕಣ್ಣಿನ ಪುಣ್ಯವೊ? ನೋಡು
ಗುಣಕೆ ಕಾರಣವೊಂದೆ? ಮಂಕುತಿಮ್ಮ

**– ಚಟುವಟಿಕೆ –**

ಅ) ಗಿಡವನ್ನು ಬೆಳೆಸುವ ಬಗೆಗೆ ನಾಲ್ಕು ಸಾಲುಗಳ ಟಿಪ್ಪಣಿ ಬರೆಯಿರಿ.

ಆ) ಸೂರ್ಯೋದಯದ ಸೌಂದರ್ಯದ ಬಗೆಗೆ ನಾಲ್ಕು ಸಾಲುಗಳ ಟಿಪ್ಪಣಿ ರಚಿಸಿ.

ಇ) **ಗಾದೆ ಮಾತನ್ನು ವಿಸ್ತರಿಸಿ ಬರೆಯಿರಿ:**
ಮನೆಗೊಂದು ಗಿಡ ಊರಿಗೊಂದು ವನ.

ಈ) ಡಿವಿಜಿ ಅವರ 'ಮಂಕುತಿಮ್ಮನ ಕಗ್ಗ' ಕಾವ್ಯವನ್ನು ಸಂಗ್ರಹಿಸಿ ಓದಿ.

ಉ) ಮಂಕುತಿಮ್ಮನ ಕಗ್ಗದ ಗದ್ಯಾನುವಾದವನ್ನು ಓದಿ.

☆☆☆☆☆

# ೧೬. ಆಸನದ ಮೇಲೆ ಆಸನ (ಗದ್ಯ)

– ರಾಶಿ (ಡಾ॥ ಎಂ. ಶಿವರಾಂ)

ಮಧ್ಯಾಹ್ನ ಸುಮಾರು ಮೂರು ಗಂಟೆ. ಕಛೇರಿಯಲ್ಲಿ ಕುಳಿತು ಬರೆದೂ ಬರೆದೂ ಸೊಂಟ ಹಿಡಿದುಕೊಂಡುಬಿಡ್ತು. ರೆಕಾರ್ಡು ರೂಮಿಗೆ ಹೋಗಿ ಒಂದು ಐದು ನಿಮಿಷ ನೆಲದ ಮೇಲೆ ಮಲಗಿದರೆ ನೋವು ಕಡಿಮೆಯಾಗಬಹುದೆಂದು ಅಲ್ಲಿಗೆ ಹೋಗಿ ಯಾರಿಗೂ ಕಾಣದ ಒಂದು ಮೂಲೆಯಲ್ಲಿ ಎರಡು ದಫ್ತರವನ್ನೇ ತಲೆದಿಂಬು ಮಾಡಿಕೊಂಡು ಮಲಗಿದೆ. ಹಾಗೆಯೇ ನಿದ್ರೆ ಹತ್ತಿದ್ದಿರಬೇಕು. ಯಾರೋ ಬಂದು ಎಬ್ಬಿಸಿದಂತಾಯಿತು. ಎಚ್ಚೆತ್ತೆ, ಕುಳಿತೆ, ಎದುರಿಗೇ ನಮ್ಮ ಚಿಕ್ಕ ಸಾಹೇಬರು. “ಏನ್ರೀ ಇದೇ ಮಲಗುವ ಮನೆಯೋ?” ಎಂದರು. “ಸರ್ವನಾಶೇ ಸಮುತ್ಪನ್ನೇ ಸತ್ಯಂ ವದತಿ ಕಿಂಕರಃ”. ನನ್ನ ಟೊಂಕನೋವು, ಅದಕ್ಕೆ ತಕ್ಕಮದ್ದು ಎಲ್ಲವನ್ನೂ ಹೇಳಿದೆ. ಚಿಕ್ಕ ಸಾಹೇಬರೂ ನಾಲ್ವತ್ತಕ್ಕೆ ಮೀರಿದ ಯೌವನಸ್ಥರು. ಆಯಕಟ್ಟು ಸ್ವಲ್ಪ ನನ್ನಂತೆಯೇ, ಹೊಟ್ಟೆಯಸುತ್ತ ಹೆಚ್ಚಳತೆ, ಮೂರು ಸಾರಿ ಕೆಮ್ಮಿದರೆ ದಮ್ಮು ಬರುವ ಜಾತಿಯವರು. ನನ್ನ ಕಷ್ಟವನ್ನು ಕೇಳಿ ಬಹಳವಾಗಿ ಪಶ್ಚಾತ್ತಪಪಟ್ಟರು. ಹಾಗೂ ಜೋರಾಗಿ ನಡೆದರೆ ಉಬ್ಬಸ ಬರುತ್ತದೆ–ಯೇ? ಎಂದರು. ಬಿಸಿಲಿನಲ್ಲಿ ಬೆವರುತ್ತದೆಯೇ? ಎಂದರು. ಊಟವಾದ ಮೇಲೆ ಎದೆ ಒತ್ತುತ್ತದೆಯೇ? ಎಂದರು. ತೇಗು ಬರುತ್ತದೆಯೇ? ಎಂದರು. ನಾನು ಸ್ವಾಭಾವಿಕವಾಗಿ ಮುಚ್ಚುಮರೆ ಇಲ್ಲದೆ ಹೊಟ್ಟೆ ತುಂಬಾ ಉಣ್ಣುವವನು. ತೇಗು ಬಂದರೇ ತೃಪ್ತಿ, ತೇಗೇ ಹೊಟ್ಟೆ ತುಂಬಿದುದಕ್ಕೆ ಸೂಚನೆ ಎಂದು ತಿಳಿದವನು. ಬಿಸಿಲಿನಲ್ಲಿ ಬೆವರುವುದೂ ಉಂಟು. ಬಸ್ಸಿಗೆ ಜೋರಾಗಿ ನಡೆದರೆ ದಮ್ಮು ಬರುವುದೂ ಉಂಟು. ಚಿಕ್ಕ ಸಾಹೇಬರು ಕೇಳಿದಾಗ ಎಲ್ಲದಕ್ಕೂ ಹೂ ಎಂದೆ. ಹಾಗೆ ಹೇಳುವಾಗಲೇ ಏನೋ ಖಾಯಿಲೆಯ ಸೂಚನೆಗಳಿವು ಎಂದು ತೋರಿ ಬಂತು.

ಸಾಹೇಬರು ಸಂತುಷ್ಟಿಯಿಂದ ನಕ್ಕರು. ನಗುತ್ತಾ ಹೇಳಿದರು. ನನಗೂ ಹೀಗೆಯೇ ಆಗಿತ್ತು. ಎರಡು ವರ್ಷದ ಕೆಳಗೆ. ಕೊಬ್ಬು ಜಾಸ್ತಿಯಾಗಿ ಎಲ್ಲಿ ಬೇಡವೋ ಅಲ್ಲೆಲ್ಲಾ ತುಂಬಿಕೊಳ್ಳುತ್ತದೆ. ಹಾಗೂ ಹೃದಯದ ಸುತ್ತಲೂ ತುಂಬಿಕೊಳ್ಳುತ್ತದೆ. ಒಂದಲ್ಲಾ ಒಂದು ದಿನ ಲಬ್ ಡಬ್ ಎನ್ನುವುದು ಲಸ್ ಡಸ್ ಎನ್ನುತ್ತದೆ. ಅಲ್ಲಿಗೆ ಮುಗಿಯಿತು. ಈಗಲೇ ಹುಷಾರಾಗಿರಿ. ಈ ಟೊಂಕನೋವು ಮೊದಲ ಸೂಚನೆ. ಆಸನಗಳನ್ನು ಹಾಕುವುದನ್ನು ಕಲಿಯಿರಿ, ಈ ಹೆಚ್ಚು ಕೊಬ್ಬೆಲ್ಲಾ ಕರಗಿ ನೀರಾಗಿ ಜಿಂಕೆಯಂತೆ ದೇಹ ಚಿಮ್ಮುತ್ತದೆ. ಹೃದಯ ಪರಿವರ್ತನೆಯಾಗುತ್ತದೆ ಎಂದರು. ಆಸನಗಳನ್ನು ಹಾಕುವ ಒಂದು ಪುಸ್ತಕವನ್ನೂ ಸೂಚಿಸಿದರು. ಇವರು ಹೇಳಿದ ಕೂಡಲೆ ಹೃದಯದ ಪರಿವರ್ತನೆಯಾಯಿತು. ಲಬ್ ಡಬ್ ಎಂದು ಹೊಡೆದುಕೊಳ್ಳುವ ಹೃದಯ ಒಮ್ಮೊಮ್ಮೆ ಲಬೋಲಬೋ ಎಂದಂತಾಯಿತು. ಒಮ್ಮೆ ಒಂದು ಗಳಿಗೆ ನಿಂತೇಹೋಯಿತು. ನನ್ನಾಟ ಆಯಿತು. ವಿಮಾ ಕಂಪನಿ ಮುಳುಗಿತು ಎನ್ನುವ ವೇಳೆಗೆ ಲಬ್‌ಲಬ್ ಎಂದಿತು. ಡಪ್ ಡಪ್ ಎಂದೂ ಅಂದಿತು. ಓಹೋ ಏನೋ ಬಂತು ನನಗೆ ಈ ವೈದ್ಯರ ಹತ್ತಿರ ಹೋಗಿ ಅವರ ಹೊಟ್ಟೆ ತುಂಬುವುದರ ಬದಲು

ಈ ಪುಸ್ತಕ ತೆಗೆದುಕೊಂಡು, ಈ ಪ್ರಕಾಶಕನಿಗಾದರೂ ಒಂದು ತುತ್ತು ಅನ್ನ ಕೊಡೋಣ ಎಂದು ಆಸನ ವಿಧಾನದ ಪುಸ್ತಕವನ್ನು ಕೊಂಡು ತಂದೆ.

ಬೆಳಿಗ್ಗೆ ಏಳುತ್ತಲೂ ಆಸನಗಳನ್ನು ಪುಸ್ತಕ ನೋಡಿಕೊಂಡು ಹಾಕಲು ಆರಂಭ ಮಾಡಿದೆ. ಪದ್ಮಾಸನ, ಕುಕ್ಕುಟಾಸನ, ಮತ್ಸ್ಯಾಸನ, ಸಿಂಹಾಸನ, ಗಜಾಸನ ಎಲ್ಲವನ್ನೂ ಹಾಕಿದೆ. ಸುಲಭವಾಗಿಯೇ ಕಂಡಿತು. ಇದರಿಂದ ಕೊಬ್ಬು ಕರಗಿ ಸೊಂಟ ಸಡಿಲವಾಗುವುದಾದರೆ ಒಳ್ಳೆಯದೇ ಆಯಿತು ಎಂದು ಮುಂದಿನ ಪಾಠಗಳನ್ನೂ ಅಭ್ಯಸಿಸ ಹೊರಟೆ.

ಒಂದು ಆಸನದ ರೀತಿಯನ್ನು ಚೆನ್ನಾಗಿ ವಿವರಿಸಿದ್ದ. ಅದನ್ನು ಹಾಕಲು ಯತ್ನಿಸಿದೆ. ಪದ್ಮಾಸನದಲ್ಲಿ ಕುಳಿತುಕೊಂಡೆ. ಬಲಗಾಲುಂಗುಷ್ಟವನ್ನು ಬಲಗೈಯಲ್ಲಿ ಹಿಡಿದು, ಕಾಲನ್ನೆತ್ತಿ ಕತ್ತಿನ ಹಿಂದೆ ಹಾಕು ಎಂದಿತ್ತು. ಒಂದು ಬೊಂಬೆಯೂ ಇತ್ತು. ಹಾಗೆಯೇ ಮಾಡಿದೆ. ಎಡಗಾಲನ್ನೂ ಅದೇ ರೀತಿ ಮಾಡು ಎಂದಿತ್ತು. ಅದನ್ನೂ ಅದೇ ರೀತಿ ಮಾಡಿದೆ. ಮೊದಮೊದಲು ಕಾಲು ಕತ್ತಿನ ಹಿಂದೆ ಹೋಗಲೊಲ್ಲದು. ನಾನು ಬಿಡಲೊಲ್ಲೆ. ಕಡೆಗೂ ಪ್ರಯಾಸಪಟ್ಟು ಕತ್ತಿನ ಹಿಂದೆ ದೂಡಿದೆ. ಹೀಗೆ ಮಾಡುವಾಗ ಎರಡೂ ಕೈಗಳ ಸಹಾಯ ತೆಗೆದುಕೊಂಡೆ. ಹಾಗಾಗಿ ಎರಡೂ ಕೈಗಳೂ ಕಾಲಿನ ಕೆಳಗೆ ಕತ್ತಿನ ಮೇಲೆ ಸಿಕ್ಕಿಹಾಕಿಕೊಂಡವು.

ಪುಸ್ತಕವನ್ನು ನೋಡುತ್ತೇನೆ. ಎರಡೂ ಕೈಗಳನ್ನೂ ನೆಲದ ಮೇಲಿಟ್ಟು ದೇಹದ ಭಾರವನ್ನು ಕೈಗಳ ಮೇಲೆ ಬಿಡು ಎಂದಿತ್ತು.





ಎರಡೂ ಕೈಗಳನ್ನು ಬಿಡಿಸಿಕೊಳ್ಳಲೇ ಆಗದು. ಒಂದು ನಿಮಿಷ, ಎರಡು ನಿಮಿಷ ಆಯಿತು. ಕಾಲುಗಳು ನೋಯಲಾರಂಭಿಸಿತು. ಕತ್ತು ಮುರಿಯುವಂತೆ ಆಯಿತು. ಕಡೆಗೆ ನೋವು ಹೆಚ್ಚಾಯಿತು. ಬಾಯಿ ಬಡಿದುಕೊಳ್ಳುವಷ್ಟು ನೋವಾಯಿತು. ಆದರೆ ಬಾಯಿ ಬಡಿದುಕೊಳ್ಳುವುದಕ್ಕೂ ಕೈಗಳು ಬೇಕಲ್ಲ. ಅವೇ ಇಲ್ಲ. ತಡೆಯಲಾರದೆ ಲಬೋ ಲಬೋ ಎಂದೆ. ಒಳಗಿನಿಂದ ಹೆಂಡತಿಯು ಬಂದಳು. ಬಂದವಳೇ ನಗಲಾರಂಭಿಸಿದಳು. ಇದೇನು ಈ ವಯಸ್ಸಿನಲ್ಲಿ ಈ ಹುಡುಗಾಟ ಎಂದಳು. ಕಾಲು ಸಿಕ್ಕಿಹಾಕಿಕೊಂಡಿದೆ ಬಿಡಿಸು ಎಂದೆ. ಅವಳೂ ಕೈಹಾಕಿ ಕಾಲು ಬಿಡಿಸಲೆತ್ನಿಸಿದಳು. ಆಗಲಿಲ್ಲ. ಜೋರಾಗಿ ಎಳೆದಳು. ಕೈಜಾರಿತು. ದೊಪ್ಪನೆ ಮೂಲೆಯಲ್ಲಿ ಬಿದ್ದಳು. ನಿಮ್ಮ ಟೊಂಕನೋವು ಹಾಗಿರಲಿ, ನನಗೆ ಬಂತು ಈಗ ಎಂದು ರೇಗುತ್ತಾ ಎದ್ದಳು. ಮರಳಿ ಯತ್ನವ ಮಾಡಿದಳು. ಆದರೆ ಪ್ರಯೋಜನವಿಲ್ಲ. ನನಗೋ ಹೀಗೆಯೇ ಸತ್ತುಹೋದರೆ ಹೆಣ ಹೊರುಕ್ಕೆ ಬಂದವರೂ ನನ್ನ ನೋಡಿ ನಗುತ್ತಾರಲ್ಲಾ ಎಂದು ಭಯ. ಏನಾದರೂ ಮಾಡೆ ಎಂದು ಕೂಗಿದೆ. ಚಿಕ್ಕ ಸಾಹೇಬರಿಗೆ ಹೇಳಿ ಕಳುಹಿಸೆ, ಅವರಿಗೆ ಇದೆಲ್ಲಾ ಬರುತ್ತೆ ಎಂದೆ. ಬೇಗ ಬೇಗ ಮಗನನ್ನು ಚಿಕ್ಕ ಸಾಹೇಬರ ಮನೆಗೆ ಕಳಿಸಿದಳು. ಅವರೂ ಬೇಗ ಬೇಗ ಬಂದರು. ನಗುತ್ತಾ ನಿಂದರು. ಕಾಲು ಕೆಳಗೆ ಕೈಹಾಕಬಾರದು ಎಂದರು. ಇದಕ್ಕೆ ಪ್ರಾಯಶ್ಚಿತ್ತವೇ ಇಲ್ಲ ಎಂದು, ಹಿಮಾಲಯದಲ್ಲಿ ಒಬ್ಬ ಗೋಸಾಯಿ ಹೀಗೆಯೇ ಮಾಡಿ ಲಯವಾದನು ಎಂದು ಧೈರ್ಯಕೊಟ್ಟರು. ನನಗೂ ಲಯವಾಗುವ ಕಾಲ ಬಂದಂತೆಯೇ ಕಂಡಿತು. ಕಡೆಗೆ ವೈದ್ಯರನ್ನು ಕರೆಸೋಣ ಅವರೇನಾದರೂ ಮಾಡಿಯಾರು ಎಂದರು. ವೈದ್ಯರೂ ಬಂದರು. ಅವರೂ ನೋಡಿದರು. ಇದು ಪೈಲ್ವಾನರ ಕೆಲಸ ನನ್ನದಲ್ಲ. ಸಾಯುವ ಹಾಗಾದರೆ ಹೇಳಿ ಕಳುಹಿಸಿ. ಆಗ ಬಂದು ಇಂಜಕ್ಷನ್ ಕೊಡುತ್ತೇನೆ ಎಂದರು. ಇಂಜಕ್ಷನ್ನಿಲ್ಲದೇ ಸಾಯುತ್ತೇನೆ. ಏನು ಬೇಡ ಹೋಗಿರಿ ಎಂದು ಅವರ ಮೇಲೆ ರೇಗಿ ಕಳಿಸಿದೆ. ಆ ವೇಳೆಗೆ ಪೈಲ್ವಾನನಿಗೆ ನಮ್ಮಾಕೆ ಹೇಳಿಕಳಿಸಿದ್ದರು. ಆತನೂ ಜಗ್ಗುಹಾಕುತ್ತ ಬಂದ. ಒಂದು ಕಾಲು ಹಿಡಿದು ಜಗ್ಗಿದ. ಅವನಿಗೆ ಕಾಲು ಜಗ್ಗಲಿಲ್ಲ. ಅಯ್ಯೋ ದೇವ ಎಂದಂದು ಇನ್ನೊಮ್ಮೆ ಜಗ್ಗಿದ. ಲಟ ಲಟ ಶಬ್ದವಾಯಿತು. ಹೋಯಿತು ನನ್ನ ಕಾಲು ಎಂದಂದುಕೊಂಡೆ. ಆದರೆ ಅವನು ಅಯ್ಯಯ್ಯೋ ಎಂದು ಹೊಡೆದುಕೊಳ್ಳಲಾರಂಭಿಸಿದ. ಅವನ ತೋಳು ಲಟಪಟವಾಗಿತ್ತು. ಇದು ನನ್ನಿಂದಾಗದು ನಮ್ಮ ಗುರುಗಳಿಗೆ ಕರೆಕಳುಹಿಸಿ ಎಂದ. ಗುರುಗಳು ಬಂದರು. ಗುರುಗಳು ಆ ಪ್ರಾಂತ್ಯಕ್ಕೆ ಪ್ರಸಿದ್ಧಿ, ಉಸ್ತಾದ್ ಹಮಾನ್‌ಖಾನ್ ಎಂದರೆ ಜಟ್ಟಿಗಳೆಲ್ಲರೂ ಮುಗ್ಗರಿಸುತ್ತಿದ್ದರು. ಆತ ಬಂದ, ಮಣ್ಣು ಕೈಗೆ ಬಳಿದುಕೊಂಡ, ನನ್ನ ಕಾಲು ಹಿಡಿದು ಸೀಬೇಕಾಯಿಯನ್ನು ಮರದಿಂದ ಕೀಳುವ ಹಾಗೆ ಕತ್ತಿನ ಹಿಂದಿನಿಂದ ಕಿತ್ತ. ಒಂದು ಕಾಲು ನೆಲದ ಮೇಲೆ ಬಿತ್ತು, ಕೈ ಸಡಿಲವಾಯಿತು. ಇನ್ನೊಂದು ಕಾಲು ಕಿತ್ತ, ಅದೂ ಬಿತ್ತು ನೆಲದ ಮೇಲೆ.

ನನಗೆ ಕಾಲು ಇದ್ದಂತೆಯೇ ತೋರಲಿಲ್ಲ. ಕತ್ತು ಮಾತ್ರ ನೋಯುತ್ತಲೇ ಇತ್ತು. ಕತ್ತಿಗೆ ಮೂರು ದಿನ ತೈಲ ಹಾಕಿ ತಿಕ್ಕಿದರೆ ಸರಿಹೋಗುತ್ತೆ ಎಂದ. ಹಾಗೆಯೇ ಮೂರು ದಿನ ತಿಕ್ಕಿದೆ. ಈಗ ಕತ್ತು ಸರಿಹೋಯ್ತು.

ಕಾಲೂ ಕಾಲಾಗಿದೆ. ಆದರೆ, ಆ ಸೊಂಟನೋವು ಮಾತ್ರ ಹೋಗಲಿಲ್ಲ. ಮಧ್ಯಾಹ್ನ ಮೂರು ಗಂಟೆ ಆದರೆ ರೆಕಾರ್ಡು ರೂಮೇ ಬಾ ಎನ್ನುತ್ತದೆ.

## ಕೃತಿ–ಕರ್ತೃ ಪರಿಚಯ



'ರಾಶಿ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಡಾ॥ ಎಂ. ಶಿವರಾಮ್‌ಅವರು (ಜನನ : ೧೯೦೫) ಬೆಂಗಳೂರಿನವರು. ಸುವಿಖ್ಯಾತ ವೈದ್ಯರಾಗಿದ್ದ ಇವರು ಬೆಂಗಳೂರು ಮೆಡಿಕಲ್ ಕಾಲೇಜಿನ ಸಂಸ್ಥಾಪಕರು. 'ಕೊರವಂಜಿ' ಎಂಬ ವಿನೋದ ಸಾಹಿತ್ಯ ಮಾಸಪತ್ರಿಕೆಯನ್ನು ಆರಂಭಿಸಿ ಇಪ್ಪತ್ತೈದು ವರ್ಷ ನಡೆಸಿದರು.

'ಮನಮಂಥನ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ 'ರಾಶಿ' ಅವರ 'ನಗು ಸಮಾಜ', 'ನಗು ದರ್ಬಾರಿಗಳು', 'ನಗು ಸಂಸಾರಿಗಳು', ಇಂದಾನೊಂದು ಕಾಲದಲ್ಲಿ', 'ಕೊರವಂಜಿಯ ಪಡುವಣ ಯಾತ್ರೆ', 'ಮನೋನಂದನ' ಇತರ ಪ್ರಮುಖ ಕೃತಿಗಳು. ಕರ್ನಾಟಕ ರಾಜ್ಯ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳಿಗೂ ಭಾಜನರಾಗಿದ್ದರು. ಅಪರಂಜಿ ಶಿವು ಅವರು ಸಂಪಾದಿಸಿರುವ 'ಬೆಸ್ಟ್ ಆಫ್ ರಾಶಿ' ಎಂಬ ಸಂಕಲನದಿಂದ 'ಆಸನದ ಮೇಲೆ ಆಸನ' ಗದ್ಯವನ್ನು ಆಯ್ಕೆ ಮಾಡಲಾಗಿದೆ.

### – ಓದಿ ತಿಳಿಯಿರಿ –

| | | | |
|---|---|---|---|
| ದಫ್ತರ | = ಫೈಲು, ಕಡತ, ದಾಖಲೆ | ದಮ್ಮು | = ಮೇಲುಸಿರು, ಉಬ್ಬಸ |
| ಸಂತುಷ್ಟಿ | = ತೃಪ್ತಿ | ಪಶ್ಚಾತ್ತಾಪ | = ದುಃಖ |
| ಬೊಂಬೆ | = ಚಿತ್ರ, ಪುತ್ಥಳಿ | ಆಸನ | = ಯೋಗಾಸನ, ದೇಹದ ಭಂಗಿಗಳು |
| ಮದ್ದು | = ಔಷಧ | ಉಂಗುಷ್ಟ | = ಅಂಗುಷ್ಠ, ಕಾಲಿನ ದೊಡ್ಡ ಬೆರಳು, ಹೆಬ್ಬೆರಳು |
| ಉಸ್ತಾದ್ | = ಗರಡಿಯ ಗುರು | ಪೈಲ್ವಾನ | = ಜಟ್ಟಿ, ಕುಸ್ತಿ ಮಾಡುವವ, ಬಲಶಾಲಿ |

### – ಗಮನಿಸಿರಿ –

ರೆಕಾರ್ಡ್ ರೂಮು = ಕಛೇರಿಯಲ್ಲಿ ಹಳೆಯ ದಾಖಲೆಗಳನ್ನು ರಕ್ಷಿಸಿ ಇಡುವ ಕೊಠಡಿ

'ಸರ್ವನಾಶೇ ಸಮುತ್ಪನ್ನೇ
ಸತ್ಯಂವದತಿ ಕಿಂಕರಃ' = ಕೆಟ್ಟ ಕಾಲ ಬಂದಾಗ ಸೇವಕನು ಸತ್ಯವನ್ನು ನುಡಿಯುತ್ತಾನೆ

ಲಬ್–ಡಬ್ = ಆರೋಗ್ಯವಂತ ಹೃದಯದ ಬಡಿತದ ಸದ್ದು

ಲಸ್–ಡಸ್ = ಹೃದಯ ಸರಿಯಿಲ್ಲದಾಗಿನ ಬಡಿತದ ಸದ್ದು

ಹೃದಯ ಪರಿವರ್ತನೆ = ಹೃದಯದ ಆರೋಗ್ಯ ಹೆಚ್ಚುವುದು (ಶಬ್ದಾರ್ಥದ ಪ್ರಕಾರ ಮನಃಪರಿವರ್ತನೆ. ಇಲ್ಲಿ ವ್ಯಂಗ್ಯಾರ್ಥದಲ್ಲಿ ಬಳಕೆ ಮಾಡಿದ್ದಾರೆ.)

ಲಟಪಟವಾಗಿತ್ತು = ಮೂಳೆ ಮುರಿದಿತ್ತು

## – ತಿಳಿದಿರಲಿ –

**೧. ಜೋರಾಗಿ ನಡೆದರೆ ಉಬ್ಬಸ ಬರುತ್ತದೆಯೆ? ಬಿಸಿಲಿನಲ್ಲಿ ಬೆವರುತ್ತದೆಯೆ? ಊಟವಾದ ಮೇಲೆ ಎದೆ ಒತ್ತುತ್ತದೆಯೆ? ಊಟವಾದ ಮೇಲೆ ತೇಗು ಬರುತ್ತದೆಯೆ?**

ಇವು ಯಾವುವೂ ರೋಗಲಕ್ಷಣವಲ್ಲ. ಆದರೆ ಯಾರಾದರೂ – ಅದರಲ್ಲೂ ಡಾಕ್ಟರು – ಹೀಗೆ ಕೇಳಿದರೆ ರೋಗಭಯ ಮೂಡುತ್ತದೆ. ಓದುಗರಲ್ಲಿ ನಗು ಅರಳುತ್ತದೆ.

**೨. "ನನಗೂ ಹಾಗೆಯೇ ಆಗಿತ್ತು"**

ಸಾಮಾನ್ಯವಾಗಿ ಇದು ಭರವಸೆಯ ಮಾತು, ಅದನ್ನು ಹೇಳುವ ರೀತಿ, ಸಂದರ್ಭ ಭಯ ಹುಟ್ಟಿಸುವಂತೆ ಇದೆ.

**೩. "ವಿಮಾ ಕಂಪನಿ ಮುಳುಗಿತು"**

ಸಾಮಾನ್ಯವಾಗಿ ಉದ್ಯೋಗಸ್ಥರು ದೊಡ್ಡ ಮೊತ್ತಕ್ಕೆ ವಿಮೆ ಮಾಡಿಸಿರುತ್ತಾರೆ. ಅವಧಿ ಮುಗಿದ ಮೇಲೆ ಹಣ ಸಂದಾಯವಾದರೆ ಕಂಪನಿಗೆ ಏನು ನಷ್ಟವಿಲ್ಲ. ಅವಧಿ ಮುಗಿಯುವ ಮೊದಲೇ ವ್ಯಕ್ತಿ ಅಸು ನೀಗಿದರೆ ಕಂಪನಿಯು ಪೂರ್ಣ ಮೊತ್ತ ನೀಡಬೇಕಾಗುತ್ತದೆ. ಅದು ಕಂಪನಿಗೆ ದೊಡ್ಡ ಲೆಕ್ಕದ ಮೊತ್ತವೇ. ಇದು ಈ ಮಾತಿನ ಹಿಂದಿನ ಸಂದರ್ಭ.

**೪. "ಪ್ರಕಾಶಕನಿಗಾದರೂ ಒಂದು ತುತ್ತು ಅನ್ನ ಕೊಡೋಣ"**

ಹಣ ಹೂಡಿ, ಪುಸ್ತಕಗಳನ್ನು ಪ್ರಕಟಿಸುವವನು ಪ್ರಕಾಶಕ. ಅವನು ಪುಸ್ತಕಗಳನ್ನು ಮಾರಿದರೆ ಲಾಭ ಬರುತ್ತದೆ. ಕೊಂಡವರು ಪ್ರಕಾಶಕನಿಗೆ ಸಹಾಯ ಮಾಡಿದಂತಾಗುತ್ತದೆ. ಇಲ್ಲಿ ಅಂತಹ ಔದಾರ್ಯವೇನಿಲ್ಲ.

**೫. ಇಲ್ಲಿನ ವ್ಯಂಗ್ಯವನ್ನು ಗಮನಿಸಿರಿ.**

"ನಾನು ಹೀಗೆಯೇ ಸತ್ತು ಹೋದರೆ ಹೆಣ ಹೊರುಕ್ಕೆ ಬಂದವರೂ ನೋಡಿ ನಗುತ್ತಾರಲ್ಲ ಎಂದು ಭಯ"

"ಸಾಯುವ ಹಾಗಾದರೆ ಹೇಳಿ ಕಳುಹಿಸಿ. ಆಗ ಬಂದು ಇಂಜಕ್ಷನ್ ಕೊಡುತ್ತೇನೆ"

"ಇಂಜಕ್ಷನ್ ಇಲ್ಲದೆ ನಾನು ಸಾಯುತ್ತೇನೆ. ಏನು ಬೇಡ ಹೋಗ್ರಿ"

## – ಅಭ್ಯಾಸ –

**ಅ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಲೇಖಕರು ರೆಕಾರ್ಡ್ ರೂಮಿನಲ್ಲಿ ಏನನ್ನು ತಲೆದಿಂಬಾಗಿ ಮಾಡಿಕೊಂಡರು?

೨. ಹೊಟ್ಟೆ ತುಂಬಿದ್ದಕ್ಕೆ ಸೂಚನೆ ಯಾವುದು?

೩. ಲೇಖಕರನ್ನು ನಿದ್ದೆಯಿಂದ ಎಬ್ಬಿಸಿದವರು ಯಾರು?

೪. ಕೊಬ್ಬು ಎಲ್ಲೆಲ್ಲಿ ತುಂಬಿಕೊಳ್ಳುತ್ತದೆ?

೫. ಆಸನ ಹಾಕುವುದನ್ನು ತಿಳಿಸುವ ಪುಸ್ತಕವನ್ನು ಲೇಖಕರು ಏಕೆ ಕೊಂಡು ತಂದರು?

೬. ಜಟ್ಟಿಗಳೆಲ್ಲರೂ ಯಾರೆಂದರೆ ಮುಗ್ಗರಿಸುತ್ತಿದ್ದರು?

೭. ಕುತ್ತಿಗೆ ಸರಿಹೋಗಲು ಎಷ್ಟು ಬಾರಿ ತೈಲ ತಿಕ್ಕಬೇಕಾಯಿತು?

೮. ಗೋಸಾಯಿ ಲಯವಾದದ್ದು ಎಲ್ಲಿ?

೯. ವೈದ್ಯರು ಯಾವಾಗ ಇಂಜೆಕ್ಷನ್ ಕೊಡುತ್ತೇನೆ ಎಂದರು?

೧೦. ಮಧ್ಯಾಹ್ನ ಮೂರು ಗಂಟೆಯಾದರೆ ಲೇಖಕರನ್ನು ಯಾವುದು ಕರೆಯುತ್ತಿತ್ತು?

**ಆ) ಈ ಪ್ರಶ್ನೆಗಳಿಗೆ ಮೂರು ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ:**

೧. ಚಿಕ್ಕ ಸಾಹೇಬರು ಲೇಖಕ ರಾಶಿ ಅವರನ್ನು ಏನು ಕೇಳಿದರು?

೨. ಹೃದಯ ಯಾವಾಗ ಪರಿವರ್ತನೆಯಾಗುತ್ತದೆ?

೩. ಲೇಖಕ ರಾಶಿ ಅವರು ಆರಂಭದಲ್ಲಿ ಹಾಕಿದ ಆಸನಗಳು ಯಾವುವು?

೪. ಎರಡು ಕೈಗಳೂ ಕತ್ತಿನ ಮೇಲೆ ಸಿಕ್ಕಿಕೊಂಡದ್ದು ಹೇಗೆ?

೫. ಲೇಖಕ ರಾಶಿ ಅವರ ಹೆಂಡತಿ ಏಕೆ ನಗಲಾರಂಭಿಸಿದರು?

೬. ಉಸ್ತಾದ್ ಹಮಾನ್‌ಖಾನ್ ಲೇಖಕರ ಕತ್ತಿನ ಮೇಲುಗಡೆ ಸಿಕ್ಕಿಹಾಕಿಕೊಂಡ ಕೈಗಳನ್ನು ಹೇಗೆ ಬಿಡಿಸಿದರು?



## – ಭಾಷಾಭ್ಯಾಸ –

**ಅ. ಈ ಕೆಳಗಿನ ವಾಕ್ಯಗಳನ್ನು ಸೂಚನೆಯಂತೆ ಬದಲಿಸಿ ಬರೆಯಿರಿ:**

೧. ಸಾಹೇಬರು ಸಂತುಷ್ಟಿಯಿಂದ ನಕ್ಕರು
*(ಗೆರೆಯೆಳೆದ ಪದದ ಬದಲಿಗೆ ಅದೇ ಅರ್ಥ ಬರುವ ಪದವನ್ನು ಬಳಸಿ ಬರೆಯಿರಿ)*

೨. ಕೊಬ್ಬು ಜಾಸ್ತಿಯಾಗಿ ಎಲ್ಲಿ ಬೇಡವೋ ಅಲ್ಲೆಲ್ಲ ತುಂಬಿಕೊಂಡು ಬಿಡುತ್ತದೆ
*("ಕೊಬ್ಬು ಬೇಕಾದಷ್ಟು ಮಾತ್ರ ಇದ್ದಾಗ" ಎಂದು ಪ್ರಾರಂಭಿಸಿ ವಾಕ್ಯವನ್ನು ಪೂರ್ತಿ ಮಾಡಿ)*

೩. ಬೆಳಗ್ಗೆ ಏಳುತ್ತಲೂ ಆಸನಗಳನ್ನು ಪುಸ್ತಕ ನೋಡಿಕೊಂಡು ಹಾಕಲು ಪ್ರಾರಂಭಿಸಿದೆ.
*(ವಾಕ್ಯವನ್ನು ನಾಳೆ ಬೆಳಗ್ಗೆ...... ಎಂದು ಪ್ರಾರಂಭಿಸಿ ವಾಕ್ಯ ಪೂರ್ಣಗೊಳಿಸಿ)*

೪. ಒಂದು ಆಸನದ ರೀತಿಯನ್ನು ಲೇಖಕ ಚೆನ್ನಾಗಿ ವಿವರಿಸಿದ್ದ
*(ಗೆರೆಯೆಳೆದಿರುವ ಪದಕ್ಕೆ ಬದಲಾಗಿ "ಲೇಖಕಿ" ಎಂದು ಬಳಸಿ ಸೂಕ್ತ ಬದಲಾವಣೆ ಮಾಡಿ)*

**ಆ. ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಅಕ್ಷರಗಳನ್ನು ಪಠ್ಯವನ್ನು ನೋಡಿ ತುಂಬಿ ಸರಿಪಡಿಸಿ ಬರೆಯಿರಿ.**

೧. ಒಂದು ಆಸನದ ರೀತಿಯ____ ಚೆ___ಗಿ___ ವಿವರಿ___ದ್ದ.

೨. ಕೈಗಳನ್ನು ಬಿಡಿ___ಕೊಳ್ಳ___ ಆಗದು.

೩. ಇದು ಪೈಲ್ವಾ___ರ ___ಲಸ. ನ___ ದ____.

೪. ಜ___ಗಳೆ ____ರೂ ಮು ____ರಿಸು ______ರು.

**ಇ. ಮಾದರಿ ಗಮನಿಸಿ. ಮಾದರಿಯಂತೆ ಕೊಟ್ಟಿರುವ ಪದಗಳನ್ನು ಬಿಡಿಸಿ ಬರೆಯಿರಿ:**

***ಮಾದರಿ : ತಲೆದಿಂಬು = ತಲೆ + ದಿಂಬು***

ಒರಗುದಿಂಬು, ಮೂಲೆಗುಂಪು, ಕಾಲುಮಣೆ, ಬಾರುಕೋಲು, ನೀರುಗಂಟೆ

**ಈ. ಈ ಕೆಳಗಿನ ಪದಗಳಲ್ಲಿ ದೀರ್ಘಾಕ್ಷರಗಳನ್ನು ಗುರುತಿಸಿರಿ:**

೧. ಸುಮಾರು ಮೂರು ಗಂಟೆ

೨. ಯಾರಿಗೂ ಕಾಣದ ಮೂಲೆ

೩. ಹೇಳಿದ ಕೂಡಲೆ

೪. ಸಾಹೇಬರು

೫. ಓಹೋ ಏನೋ ಬಂತು

**ಉ. ಇವುಗಳಲ್ಲಿ ಒತ್ತಕ್ಷರಗಳನ್ನು ಗುರುತಿಸಿರಿ:**

೧. ನನ್ನ ಟೊಂಕನೋವು ಅದಕ್ಕೆ ಮದ್ದು ಎಲ್ಲವನ್ನೂ ಹೇಳಿದೆ

೨. ನಾನು ಸ್ವಾಭಾವಿಕವಾಗಿ ಮುಚ್ಚುಮರೆ ಇಲ್ಲದೇ ಉಣ್ಣುವವನು

೩. ಆಯಕಟ್ಟು ಸ್ವಲ್ಪ ನನ್ನಂತೆಯೇ. ಹೊಟ್ಟೆಯ ಸುತ್ತ ಹೆಚ್ಚಳತೆ

**– ಚಟುವಟಿಕೆ –**

೧) ಯೋಗಾಸನದ ಮಹತ್ವವನ್ನು ತಿಳಿಯಿರಿ.

೨) ಮಾರ್ಗದರ್ಶನ ಪಡೆದು ಯೋಗಾಭ್ಯಾಸ ಮಾಡಲು ಯೋಗ ತರಗತಿಗಳಿಗೆ ಭೇಟಿ ನೀಡಿ.

೩) ರಾಶಿ ಅವರ ವಿನೋದ ಪ್ರಬಂಧಗಳನ್ನು ಸಂಗ್ರಹಿಸಿ ಓದಿ.

☆ ☆ ☆ ☆ ☆

# ಪದಕೋಶ

**ಅ**

ಅಗಣಿತ – ಎಣಿಕೆಗೆ ಮೀರಿದ
ಅಗೆ – ತೋಡು, ಹಳ್ಳಮಾಡು
ಅಮೂಲ್ಯ – ಬೆಲೆಕಟ್ಟಲಾರದ, ಶ್ರೇಷ್ಠ
ಆರಾಧನೆ – ಪೂಜೆ
ಅಂತಾರಾಷ್ಟ್ರೀಯ – ರಾಷ್ಟ್ರ ರಾಷ್ಟ್ರಗಳ ನಡುವಣ
ಅಂಗುಷ್ಟ=ಅಂಗುಷ್ಠ – ಕಾಲಿನ ದೊಡ್ಡ ಬೆರಳು

**ಆ**

ಆಚಾರ – ಒಳ್ಳೆಯ ನಡತೆ
ಆಡಳಿತ – ರಾಜ್ಯ, ಸರ್ಕಾರ ನಡೆಸುವ ರೀತಿ
ಆರದೊ – ಯಾರದೊ

**ಇ**

ಇಕ್ಕು – ಹಾಕು, ಧರಿಸು
ಇತಿಹಾಸ – ಚರಿತ್ರೆ, ಭೂತಕಾಲದಲ್ಲಿ ನಡೆದ ಘಟನೆಗಳ ಅನುಕ್ರಮ ನಿರೂಪಣೆ
ಇಳೆ – ಭೂಮಿ, ಪೃಥ್ವಿ, ನೆಲ

**ಈ**

ಈರ್ಷ್ಯೆ – ಮಾತ್ಸರ್ಯ, ಹೊಟ್ಟೆಉರಿ

**ಉ**

ಉತ್ಕಟ – ವಿಪರೀತ, ವಿಷಮ

**ಎ**

ಎಂಜಲು – ತಿಂದು/ಕುಡಿದು ಉಳಿದ ಆಹಾರ, ಪಾನೀಯ

**ಏ**

ಏದುಸಿರು – ಮೇಲುಸಿರು

**ಐ**

ಐಕ್ಯ – ಒಂದು ಎಂಬ ಭಾವನೆ

**ಒ**

ಒಡಕು – ಭಿನ್ನತೆ

**ಓ**

ಓಲೆ – ಪತ್ರ, ಕಾಗದ

**ಕ**

ಕಛೇರಿ – ಆಡಳಿತ ನಡೆಸುವ ಸ್ಥಳ
ಕಮರು – ಒಣಗು
ಕಾರ್ಯಪಡೆ – ನಿರ್ದಿಷ್ಟ ಕೆಲಸಕ್ಕಾಗಿ ನಿಯೋಜಿಸಲ್ಪಟ್ಟ ಜನಗಳ ಸೈನ್ಯ
ಕೈದೋಟ – ಮನೆ ಮುಂದಿನ ಸಣ್ಣ ತೋಟ
ಕೊಬ್ಬು – ನೆಣ (ಈಚಿಣ), ಸೊಕ್ಕು

**ಗ**

ಗಂಜಳ – ಹಸು, ಎಮ್ಮೆಗಳ ಮೂತ್ರ
ಗುಡಿಗೋಪುರ – ದೇವಸ್ಥಾನಗಳ ಶಿಖರ

**ಫ**

ಫರಟ್ಟ – ಅಧೀನಕ್ಕೆ ಒಳಪಡಿಸಿಕೊಂಡವನು

**ಚ**

ಚಿಕ್ಕೆ – ನಕ್ಷತ್ರ
ಚಿಮ್ಮು – ಉಕ್ಕುವುದು

**ಜ**

ಜಗ್ಗು – ಎಳೆ, ಭಾರದಿಂದ ಬಾಗು, ಬಗ್ಗು
ಜೀವನಾಧಾರ – ಬದುಕಿಗೆ ಆಸರೆ

**ಟ**

ಟೊಂಗೆ – ಮರಗಿಡಗಳ ಚಿಕ್ಕ ರೆಂಬೆ

**ತ**

ತಣಿ – ತೃಪ್ತಿಪಡಿಸು
ತಳೆ – ಧರಿಸು, ಹೊಂದು
ತುಹಿನ – ಹಿಮ, ಮಂಜು
ತೊಡಕು – ತೊಂದರೆ, ಅಡಚಣೆ

**ದ**

ದಂಡನಾಯಕ – ಸೇನೆಯ ಮುಖ್ಯಸ್ಥ, ನಾಯಕ
ದರಿದ್ರ – ದಾರಿದ್ರ್ಯ, ಬಡತನ
ದಿನಪ – ಸೂರ್ಯ
ದೈವದತ್ತ – ದೇವರಿಂದ ಕೊಡಲ್ಪಟ್ಟ

## ನ

ನೀತಿ – ಬದುಕುವ ದಾರಿ
ನೆರೆಹೊರೆ – ಅಕ್ಕಪಕ್ಕ, ಸುತ್ತಿನ
ನೆಲ – ಭೂಮಿ
ನುಡಿ – ಮಾತು, ಭಾಷೆ

## ಪ

ಪರಿವರ್ತನೆ – ಬದಲಾವಣೆ
ಪಸುರಿನುಡೆ – ಹಸುರಿನ ವಸ್ತ್ರ
ಪಾತಕಿ – ಪಾಪಿ
ಪ್ರಕಾಶಕ – ಪುಸ್ತಕಗಳನ್ನು ಹಣಹೂಡಿ ಪ್ರಕಟಿಸುವವ

## ಬ

ಬಾಡು – ಒಣಗು, ಮುಗ್ಗಾಗು
ಬಿಡುತೆ – ಬಿಡುಗಡೆ, ಸ್ವಾತಂತ್ರ್ಯ ('ಬಿಡು' ಧಾತುವಿನ ಭಾವನಾಮ)
ಬಿಡುತೆಗುಡಿ – ಸ್ವಾತಂತ್ರ್ಯ ಭವನ
ಬೆಚ್ಚು – ಬೆದರು, ಹೆದರು
ಬ್ರಹ್ಮ – ಇಡೀ ಸೃಷ್ಟಿಗೆ ಆಧಾರವಾದ ಮೂಲ ಪರಿಕಲ್ಪನೆ (ಬ್ರಹ್ಮ ಪದಕ್ಕೆ ಈ ಅರ್ಥದಲ್ಲಿ ಲಿಂಗಭೇದವಿಲ್ಲ)
ಬ್ರಹ್ಮಾನುಭವ – ಎಲ್ಲವೂ ಬ್ರಹ್ಮವೆಂಬ ಅನುಭವ

## ಮ

ಮಾರಣ ಹೋಮ – ಶತ್ರು ನಾಶಕ್ಕಾಗಿ ಮಾಡುವ ಹೋಮ
ಮೂಲೆ – ಎರಡು ಗೋಡೆಗಳು ಸೇರುವ ಸ್ಥಳ
ಮೆತ್ತೆ – ಒರಗುದಿಂಬು
ಮದ್ದಿನ – ಮಧ್ಯಾಹ್ನ

## ಯ

ಯೌವನಸ್ಥರು – ವಯಸ್ಕರು

## ರ

ರಾತ್ರೋರಾತ್ರಿ – ಇಡೀರಾತ್ರಿ
ರೆಕಾರ್ಡು – ದಾಖಲೆ ಪತ್ರಗಳು

## ಲ

ಲಯ – ನಾಶ, ಪ್ರಳಯ, ತಾಳ, ಕಾಲಪ್ರಮಾಣ

## ವ

ವೀರಮರಣ – ಹೋರಾಡಿ ಸಾಯುವುದು
ವಿವೇಕ – ಸರಿ–ತಪ್ಪು ನಿರ್ಧರಿಸುವ ಸಾಮರ್ಥ್ಯ

## ಶ

ಶಿಕ್ಷಕಿ – ಉಪಾಧ್ಯಾಯಿನಿ
ಶಿಕ್ಷಣ – ವಿದ್ಯಾಭ್ಯಾಸ
ಶಾಂತಿ – ಸಮಾಧಾನ ಚಿತ್ತತೆ, ಅಶಾಂತಿಯಿಲ್ಲದ ಸ್ಥಿತಿ

## ಸ

ಸಮುದಾಯ – ಜನಗಳ ಸಮಷ್ಟಿ
ಸರ್ವತೋಮುಖ – ಎಲ್ಲ ರೀತಿಯ
ಸರ್ವಾಂಗೀಣ – ಎಲ್ಲ ಭಾಗಗಳ
ಸಹಭಾಗಿತ್ವ – ಎಲ್ಲರೂ ಪಾಲು ನೀಡಿ ಕೆಲಸ ಮಾಡುವುದು
ಸಹಯೋಗ – ಒಟ್ಟಾಗಿ ಮಾಡುವ ಕೆಲಸ
ಸುಭಿಕ್ಷ – ಸಮೃದ್ಧಿ
ಸಸ್ಯಶ್ಯಾಮಲ – ವನಸ್ಪತಿಗಳಿಂದ ಕಡು ಹಸುರಾದ
ಸಂಚುಗಾರ – ಒಳಗೊಳಗೆ ಸಂಚು ರೂಪಿಸುವುದು
ಸುಶ್ರಾವ್ಯ – ಇಂಪಾದ
ಸಾಮಂತರಾಜ – ದೊಡ್ಡ ರಾಜನಿಗೆ ವಾರ್ಷಿಕ ಕಪ್ಪ ಕೊಟ್ಟು ತನ್ನೊಳಗೆ ಸ್ವಾತಂತ್ರ್ಯ ಅನುಭವಿಸುವ ರಾಜ
ಸಾಸಿರ – ಸಾವಿರ
ಸ್ವಾವಲಂಬನೆ – ತನ್ನ ಸಾಮರ್ಥ್ಯವನ್ನೇ ನಂಬಿರುವುದು

## ಹ

ಹತ್ಯಾಕಾಂಡ – ಸಾಲು ಸಾಲು ಕೊಲೆ
ಹೆಣ – ಶವ, ಜೀವ ಹೋದ ದೇಹ
ಹಂತಕ – ಕೊಲೆಗಾರ